# ಭಾರತೀಯರ ಮೇಲ್ಮೆ



ಲೇಖಕ:

ಶ್ರೀ. ನಾರಾಯಣ ಶರ್ಮಾ



ಪ್ರಕಾಶಕ:

ಶ್ರೀ. ಸುರೇಂದ್ರ ಶಿವರಾವ ದೇಸಾಯಿ. ಎಂ. ಎ.,




ಕಾರ್ಯದರ್ಶಿ:

ಕರ್ನಾಟಕ ಶಿಕ್ಷಣ ಸಮಿತಿ, ಧಾರವಾಡ.



೧೯೩೧.

ಬೆಲೆ ರೂ. ೧-೦-೦

# ಅರ್ಪಣ



ಕನ್ನಡನಾಡಿನ ಹಿರಿಯರಾದ

**ದೇಶಭಕ್ತ ಶ್ರೀ. ವಿನಾಯಕ ಬಾಬಾಜಿ ಜೋಶಿ. ಬಿ. ಎ.,**

ರಿಟಾಯರ್ಡ ಎಜ್ಯುಕೇಶನಲ್ ಇನಸ್ಪೆಕ್ಟರ, ಧಾರವಾಡ

ಇವರಿಗೆ—

ಅವರ ಹೆಚ್ಚಿನ ಸ್ವಾರ್ಥತ್ಯಾಗ, ಲೋಕಸೇವಾತತ್ಪರತೆ,

ಕನ್ನಡ ನಾಡುನುಡಿಗಳ ಏಳಿಗೆಯ ಹಂಬಲ,

ಶಿಕ್ಷಣಪ್ರಿಯತೆ, ಸತ್ಯನಿಷ್ಠೆ

ಮೊದಲಾದ ಬೆಳಗುವ ಗುಣಗಳಿಗಾಗಿ

ಗ್ರಂಥಕರ್ತ.

# ಪ್ರಕಾಶಕರ ಮುನ್ನುಡಿ.

ಪ್ರಪಂಚದಲ್ಲಿ ಎಲ್ಲೆಲ್ಲಿಯೂ ಒಂದೇ ಸೃಷ್ಟಿನಿಯಮವು ರಾಜ್ಯವಾಳುತ್ತಿದೆ. ಸ್ವಾತಂತ್ರ್ಯಸೂರ್ಯನು ಬೆಳಗುತ್ತಿರುವ ದೇಶಗಳಲ್ಲಿ ಕಲೆ, ವಿದ್ಯೆ, ಸಾಹಸ, ಸಂಪತ್ತು, ಶೌರ್ಯಧೈರ್ಯಾದಿಗಳು ನಲಿದಾಡುತ್ತವೆ. ಸ್ವಾತಂತ್ರ್ಯವಿಲ್ಲದೆ ಪರರ ದಾಸ್ಯತ್ವದಲ್ಲಿ ತೊಳಲಾಡುತ್ತಿರುವ ದೇಶಗಳಲ್ಲಿ ಅಜ್ಞಾನ, ಹೇಡಿತನ, ಒಳಜಗಳ, ಪ್ರಪಂಚದಲ್ಲಿ ಹೊರಬಿದ್ದು ಹೋಗಿ ಎದುರಿಸುವ ಸಾಹಸವಿಲ್ಲದೆ ಮನೆಮಾರಿಯಾಗೋಣ, ಬಡತನ, ಮೂಢಾಚಾರ, ಮೊದಲಾದವುಗಳು ತಮ್ಮ ಸಾಮ್ರಾಜ್ಯವನ್ನು ಸ್ಥಾಪಿಸುತ್ತವೆ. ಹೀಗೆ ಬೆಳಕಿದ್ದಲ್ಲಿ ಕತ್ತಲೆಯೂ ಕತ್ತಲೆಯಿದ್ದಲ್ಲಿ ಬೆಳಕೂ ಕಾಲಕ್ರಮೇಣ ಸಂಭವಿಸುವದು ಸ್ವಾಭಾವಿಕನಿಯಮವು. ಸುಖದ ಕಾಲದಲ್ಲಿ ದುಃಖವನ್ನೂ ದುಃಖದ ಕಾಲದಲ್ಲಿ ಸುಖವನ್ನೂ ಮನುಷ್ಯನು ಮರೆತು ಬಿಡುವಂತೆ ಕತ್ತಲೆಯ ಕಾಲದಲ್ಲಿ ಬೆಳಕನ್ನೂ ಬೆಳಕಿನ ಕಾಲದಲ್ಲಿ ಕತ್ತಲೆಯನ್ನೂ ಮರೆಯುತ್ತಾನೆ. ಮಹಾಭಾರತಯುದ್ಧದ ಕಾಲದಿಂದೀಚೆಗೆ ಹಿಂದುಸ್ಥಾನವು ಕತ್ತಲೆಯಲ್ಲಿ ಮುಸುಕಿಕೊಂಡಿರುವಾಗ ಪಶ್ಚಿಮದೇಶಗಳು ಬೆಳಕಿನಲ್ಲಿ ಬೆಳಗುತ್ತಿವೆ. ಆ ಬೆಳಕನ್ನು ನೋಡಿ, ಬಹುಕಾಲ ಕತ್ತಲೆಯಲ್ಲಿಯೇ ಗೂಗೆಯಾಗಿದ್ದ ನಮ್ಮ ಕಣ್ಣುಗಳು ಚಂಚಲವಾದವು. ಅಂಥ ಬೆಳಕು ನಮ್ಮಲ್ಲಿಯೂ ಹಿಂದಕ್ಕೆ ಇತ್ತೆಂಬ ಕಲ್ಪನೆಯು ಕೂಡ ನಮ್ಮಲ್ಲಿ ಕಾಣದಾಗಿ, ಹಾಗೇ ಇತ್ತೆಂದು ಹೇಳುವ ನಮ್ಮವರ ಮಾತಿಗೆ ಕಿವಿಗೊಡುವಷ್ಟು ಮತಿಗೇಡಿಗಳಾಗಿ ಕಣ್ಣು-ಕಿವಿಗಳೆರಡನ್ನೂ ಪಶ್ಚಿಮದಲ್ಲಿಯೇ ನಾವು ನೆಡಿಸಿಕೊಂಡೆವು.

ಪ್ರತಿಯೊಂದು ರಾಷ್ಟ್ರವು ಊರ್ಜಿತ ಸ್ಥಿತಿಯನ್ನು ಹೊಂದಬೇಕಾದರೆ ಹಿರಿಯರ ಕಾಲದಿಂದ ರಕ್ತನಾಳಗಳಲ್ಲಿ ಬೆರತು, ಇಳಿದು ಬಂದ ತನದೊಂದು ವಿಶಿಷ್ಟಮಾರ್ಗವನ್ನು ಅವಲಂಬಿಸಬೇಕು. 'ಸ್ವೇ ಸ್ವೇ ಕರ್ಮಣ್ಯಭಿರತಃ ಸಂಸಿದ್ಧಿಂ ಲಭತೆ ನರಃ' ಎಂಬ ಗೀತೋಕ್ತಿಯಂತೆ ಪ್ರತಿಯೊಂದು ರಾಷ್ಟ್ರವು ತನ್ನ ಸ್ವಧರ್ಮದಂತೆ ಆಚರಿಸಬೇಕು. ಆದರೆ ಹಾಗೆ ಹೇಳುವ ನಮ್ಮವರ ಮಾತಿಗೆ ಕಿವಿಗೊಡುವವರಾರು ? ಕಿವಿಕಣ್ಣುಗಳೆರಡನ್ನು ಪಶ್ಚಿ

ಮಕ್ಕೆ ಮಾರಿಕೊಂಡಿರುವವರ ಕಿವಿಗಳನ್ನು ಚುಚ್ಚುವ ಅಕ್ಕಸಾಲಿಗನು ಪಶ್ಚಿಮದಿಂದಲೇ ಬರಬೇಕಲ್ಲವೆ ? ಇನ್ನೂ ನಮ್ಮ ಮೋರೆಯು ಪಶ್ಚಿಮದ ನಿಟ್ಟಿನಲ್ಲಿಯೇ ನೆಟ್ಟಿರುವದರಿಂದ, ಪಾಶ್ಚಿಮಾತ್ಯ ವಿದ್ವಾಂಸರನೇಕರು ನಮ್ಮ ಪೂರ್ವದ ಬೆಳಕನ್ನೂ ಕಂಡು ಹಿಡಿದು ನಮ್ಮೆದುರಿಗೆತ್ತಿ ತೋರಿಸುತ್ತಿದ್ದಾರೆ. ಆ ಬೆಳಕನ್ನೇ ಈ ಗ್ರಂಥದಲ್ಲಿ ಸುವ್ಯವಸ್ಥಿತವಾಗಿ ಆ ಪಾಶ್ಚಿಮಾತ್ಯರ ಮಾತಿನಲ್ಲಿಯೇ ಬರೆದು ತೋರಿಸಿರುತ್ತದೆ. ನಮ್ಮ ಪ್ರತಿಬಿಂಬವನ್ನು ನಾವು ಚನ್ನಾಗಿ ನೋಡಿಕೊಂಡು ನಮ್ಮ ಅರಿವನ್ನುಂಟು ಮಾಡಿಕೊಳ್ಳಲಿಕ್ಕೆ ಅನುಕೂಲವಾಗುವಂತೆ ಪಾಶ್ಚಿಮಾತ್ಯರು ನಮ್ಮೆದುರಿಗೆ ಹಿಡಿದ ನಿಲುಗನ್ನಡಿಯಂತಿದು.

ಈಗ ನಮ್ಮ ದೇಶಕ್ಕೆ ಅವಶ್ಯವಾಗಿ ಬೇಕಾದವುಗಳು ಭೌತಿಕ ಶಾಸ್ತ್ರಾಧ್ಯಯನ, ವ್ಯಾಪಾರೋದ್ಯೋಗ, ಪರದೇಶ ಒಕ್ಕಲಿಕೆ, ಸಾಹಸ ಇವೇ. ಆದರೆ ಈ ಗುಣಕರ್ಮಗಳನ್ನು ನಮ್ಮ ಹಿರಿಯರು ಮೈಗೂಡಿಸಿಕೊಂಡಿದ್ದಿಲ್ಲೆಂದೂ ಅವು ನಮ್ಮ ರಕ್ತನಾಳಗಳಲ್ಲಿ ಇಳಿದು ಬಂದಿಲ್ಲವೆಂದೂ ಅವುಗಳನ್ನು ನಾವೀಗ ಪಾಶ್ಚಿಮಾತ್ಯರಿಂದ ಹೊಸದಾಗಿ ಕಲಿಯಬೇಕಾಗಿರುವದೆಂದೂ ನಮ್ಮಲ್ಲನೇಕರ ತಿಳುವಳಿಕೆಯಿದೆ. ಶಾಲೆಕಾಲೇಜಗಳಲ್ಲಿ ಕೂಡ ವಿದ್ಯಾರ್ಥಿಗಳು ಭೌತಿಕಶಾಸ್ತ್ರಾಧ್ಯಯನವೆಂದರೆ ಒಲ್ಲರು. ಮನೆಮಾರುಗಳನ್ನು ಆಪ್ತೇಷ್ಟರನ್ನು ಬಿಟ್ಟು ಹೊರಬಿದ್ದು ಧೈರ್ಯ-ಶೌರ್ಯ ಸಾಹಸಗಳನ್ನು ತೋರ್ಪಡಿಸುವದೆಂದರೆ ಒಲ್ಲರು. ಪ್ರವಾಸಸಂಚಾರಾದಿಗಳಿಂದ ವ್ಯಾಪಾರೋದ್ಯೋಗಗಳನ್ನು ಕೈಕೊಳ್ಳಲು ಒಲ್ಲರು. ನಿಯಮಿತ ಕಾಲಕ್ಕೆ ಒದಗಿಬರುವ ಆಹಾರ ಸ್ನಾನಾದಿಗಳಿಗೆ ಮೋಹಗೊಂಡು ಪಂಜರದಲ್ಲುಳಿಯಲು ಬಯಸುವ ಗಿಳಿಯಂತೆ ನಿಶ್ಚಿಂತೆಯ ತಿಂಗಳ ಸಂಬಳಕ್ಕೆ ಮನಸೋತು ಅನ್ಯರ ಅಡಿಯಾಳಾಗಿ ದುಡಿಯುವದಕ್ಕಿಂತ ಸ್ವತಃ ಹೊಣೆಗಾರಿಕೆಯನ್ನು ಹೊತ್ತು ಪ್ರಪಂಚವನ್ನು ಧೈರ್ಯದಿಂದ ಎದುರಿಸಿ ತಮ್ಮ ಯೋಗಕ್ಷೇಮವನ್ನು ತಾವು ನೋಡಿಕೊಳ್ಳುವದಲ್ಲದೆ ಅನ್ಯರ ಯೋಗಕ್ಷೇಮದ ಮಾರ್ಗವನ್ನೂ ಕಲ್ಪಿಸಿಕೊಡುವ ಸಾಹಸವನ್ನು ಮಾಡಲು ನಮ್ಮವರು ಒಲ್ಲರು. ಹುಟ್ಟಿದ ನೆಲದಿಂದ ಕಿತ್ತು ಹೊಸನೆಲದಲ್ಲಿ ನೆಟ್ಟ ಸಸ್ಯವು ಒಳ್ಳೇ ರಭಸದಿಂದ ರಸವತ್ತಾಗಿ ಚಿಗಿತು ಬೆಳೆದು ಒಳ್ಳೇ ಫಲದಾಯಕ

ವಾಗುವಂತೆ ಸ್ವದೇಶವನ್ನು ಬಿಟ್ಟು ಮುಂದರಿದು ಹೋಗಿ ಪರದೇಶ ಗಳಲ್ಲಿ ತಳವೂರಿ ನೆಲಿಸಿ ಬೀಗಿ ಬೆಳೆಯಲು ನಮ್ಮವರು ಬಲ್ಲರು. ಇವು ಗಳ ಮಾತನ್ನೆತ್ತಿದ ಕೂಡಲೇ ನಮ್ಮವರು ಜೋಲು ಮೋರೆ ಹಾಕಿಕೊಂಡು ತಲೆ ತಗ್ಗಿಸಿಕೊಂಡು ಕೂಡುವರು. ಹೀಗೆ ತಗ್ಗಿದ ಮೋರೆಯನ್ನು ಮೇಲಕ್ಕೆತ್ತಿ ಕೆನ್ನೆಗೆರಡು ಬಲವಾದ ಏಟನ್ನು ಕೊಟ್ಟು ಮುಚ್ಚಿದ ಕಣ್ಣನ್ನೇ ತೆರೆಯುವ ಉದ್ದೇಶದಿಂದ ಕರ್ನಾಟಕ ಶಿಕ್ಷಣಸಮಿತಿಯವರು ಬರೆಯಿಸಿದ ಪುಸ್ತಕವಿದು. "ಮೂರ್ಖರೇ, ನಿಮ್ಮ ಹಿರಿಯರು ಇಂಥ ಸಾಹಸ ಕಾರ್ಯಗಳನ್ನು ಮಾಡಿಲ್ಲೆಂದೂ ನಿಮ್ಮ ರಕ್ತನಾಳದಲ್ಲಿಳಿದು ಬಂದಿಲ್ಲೆಂದೂ ನೀವದನ್ನು ಹೊಸದಾಗಿ ಪಾಶ್ಚಿಮಾತ್ಯರಿಂದ ಕಲಿಯಬೇಕಾಗಿರುವದೆಂದೂ ತಿಳಿಯುವದು ಕೇವಲ ಹೇಡಿತನವು. ನಿಮ್ಮವರು ಇಜಿಪ್ತದೇಶದಲ್ಲಿಯೂ ನೆಲೆಸಿದ್ದರು; ದಕ್ಷಿಣ ಆಫ್ರಿಕಾದ ವರೆಗೂ ವ್ಯಾಪಾರವನ್ನು ಹಬ್ಬಿಸಿದರು; ಚಿತ್ರ, ಸಂಗೀತ, ಶಿಲ್ಪ, ವಾಙ್ಮಯ ಮೊದಲಾದ ಕಲೆಗಳಲ್ಲಿಯೂ ನುರಿತ ವರಿದ್ದರು; ರಸಾಯನಶಾಸ್ತ್ರ, ಪದಾರ್ಥವಿಜ್ಞಾನಶಾಸ್ತ್ರ, ಭೂಗೋಲಶಾಸ್ತ್ರ, ಪ್ರಾಣಿಶಾಸ್ತ್ರ, ವನಸ್ಪತಿಶಾಸ್ತ್ರ, ಔಷಧಶಾಸ್ತ್ರ ಮೊದಲಾದ ಭೌತಿಕಶಾಸ್ತ್ರ ಗಳಲ್ಲಿಯೂ ನೌಕಾ ಮತ್ತು ವಿಮಾನಗಳನ್ನು ಕಟ್ಟುವದರಲ್ಲಿಯೂ ಒಳ್ಳೇ ನಿಷ್ಣಾತರಾಗಿದ್ದರು. ನಿಮ್ಮವರ ವ್ಯಾಪಾರವು ವಿಲಾಯತಿಯವರನ್ನು ಬೆರಗು ಮಾಡಿತ್ತು. ಅವರು ನಿಮ್ಮಂತೆ ಕೇವಲ ಧರ್ಮಮೂಢರಾಗಿದ್ದಿಲ್ಲ. ಪರ ಲೋಕಸುಖದಲ್ಲಿಯೇ ಮನವನ್ನಿಟ್ಟು ಇಹಲೋಕಯಾತ್ರೆಯನ್ನು ತಿರಸ್ಕ ರಿಸಿದ್ದಿಲ್ಲ. ಇಹಪರಗಳೆರಡನ್ನೂ ಅವರು ಚನ್ನಾಗಿ ಸಾಧಿಸಿಕೊಂಡಿದ್ದರು. ಆ ಹಿರಿಯರ ಹಾದಿಯನ್ನೇ ನೀವು ಹಿಡಿದುಕೊಂಡು ನಡೆದರೆ ನಿಮಗೆ ಕ್ಷೇಮವಾಗುವದು." ಎಂದು ಪಾಶ್ಚಿಮಾತ್ಯರ ಮಾತಿನಲ್ಲಿಯೇ ನಮ್ಮವರ ಕಿವಿಹಿಂಡಿ ಬುದ್ಧಿಗಲಿಸುವ ಉದ್ದೇಶದಿಂದ ಬರೆಯಿಸಿದ ಪುಸ್ತಕವಿದು. ಹುಟ್ಟಿ ನಿಂದಲೂ ಕುರಿಗಳ ಹಿಂಡಿನಲ್ಲಿಯೇ ಬೆರೆತು ಬೆಳೆದ ಸಿಂಹದ ಮರಿಯು ಕುರಿಗಳಂತೆ 'ಬ್ಯಾ, ಬ್ಯಾ' ಎಂದು ಅರಲುತ್ತಿರುವದನ್ನು ಕಂಡು ಮತ್ತೊಂದು ಹೊರಗಿನ ಸಿಂಹವು ಬಂದು ಆ ಮರಿಯೆದುರಿಗೆ ನಿಲುಗನ್ನಡಿಯನ್ನು ಎತ್ತಿಹಿಡಿದು ಅದರ ನಿಜಸ್ವರೂಪದ ಅರಿವನ್ನುಂಟುಮಾಡಿಕೊಟ್ಟು ಗರ್ಜಿ ಸಲು ಹೇಳಿದಂತೆ, ಪರದೇಶದ ವಿದ್ವಾಂಸ–ಸಿಂಹವು ನಮ್ಮೆದುರಿಗೆ ವಿಶೇ

ಷತಃ ತರುಣರೆದುರಿಗೆ ಎತ್ತಿಹಿಡಿದ ನಿಲುಗನ್ನಡಿಯಂತೆ ಈ ಗ್ರಂಥವು ಪರಿಣಮಿಸಲೆಂದು ಹಾರೈಸುತ್ತೇವೆ. ಪರಪ್ರಾಂತದ ಭಾಷೆಗಳಲ್ಲಿ ಇಂಥ ಗ್ರಂಥಗಳಾಗಿ ಬಹಳ ದಿನಗಳಾಗಿದ್ದರೂ ಕನ್ನಡದಲ್ಲಿ ಇದೊಂದು ದೊಡ್ಡ ಕೊರತೆಯಾಗಿತ್ತು. ಈ ಗ್ರಂಥವನ್ನು ಶ್ರೀನಾರಾಯಣ ಶರ್ಮರು ತಮ್ಮ ರಸವತ್ತಾದ ಜನಪ್ರಿಯ ಭಾಷೆಯಲ್ಲಿ ಬರೆದು ಕೊಟ್ಟುದಕ್ಕಾಗಿ ಸಮಿತಿಯವರೂ ಕನ್ನಡಿಗರೂ ಋಣಿಯಾಗಿರಬೇಕಾಗಿದೆ. ಮುದ್ದಾಗಿ ಮುದ್ರಿಸಿ ಕೊಟ್ಟುದಕ್ಕಾಗಿ ಶ್ರೀಕೃಷ್ಣ ಮುದ್ರಣಾಲಯದ ಒಡೆಯರಾದ ಶ್ರೀಮತ್ ಮುತಾಲೀಕದೇಸಾಯಿ ಪ್ರಲ್ಹಾದರಾಯರ ಉಪಕಾರವನ್ನು ಸ್ಮರಿಸುತ್ತೇವೆ. ಕನ್ನಡಿಗರು ಹುರುಪಿನಿಂದ ಮುಂದೆ ಓಡಿಬಂದು ಈ ಗ್ರಂಥವನ್ನು ಕೊಂಡು ಓದಿ ಹುರಿಗೊಂಡರೆ ಪ್ರಕಾಶಕರು ಕೃತಾರ್ಥರಾಗುವರು; ಹಾಗೆ ಅವರಿಗೆ ಬುದ್ಧಿಯನ್ನು ಕೊಡಲೆಂದು ಪರಮಾತ್ಮನನ್ನು ಪ್ರಾರ್ಥಿಸುತ್ತೇವೆ.

ಕರ್ನಾಟಕ ಶಿಕ್ಷಣ ಸಮಿತಿ
ಧಾರವಾಡ.
ತಾ ೧೫-೧೧-೧೯೩೧.

**ಸುರೇಂದ್ರ ಶಿವರಾವ ದೇಸಾಯಿ,**
ಕಾರ್ಯದರ್ಶಿ.

# ‘ನನ್ನ ನಾಲ್ಕು ಮಾತುಗಳು.’

ಪುಸ್ತಕಗಳನ್ನು ಬರೆಯುವ ಹುರುಪು ಇದ್ದರೂ, ಅವುಗಳನ್ನು ಆಗಾಗ್ಗೆ ಮುದ್ರಿಸಿ ಬೈಲಿಗೆ ತರುವಷ್ಟು ಶಕ್ತಿಯಿಲ್ಲದೆ, ಕೋಂಪೆಯಲ್ಲಿಯೇ ಕೊರಗುತ್ತಿರುವ ಬಡ ಬರಹಗಾರನನ್ನು ಬಲುಮೆಯಿಂದ ಬೆಳಕಿಗೆ ಎಳೆದುತಂದು, ಅವರಿಗೆ ಧೈರ್ಯವಿತ್ತು ಹೊಸ ಹೊಸ ಪುಸ್ತಕ ಬರೆಯು ಹಚ್ಚುವ ವ್ರತವನ್ನು ತೊಟ್ಟ ಕರ್ನಾಟಕ ಶಿಕ್ಷಣ ಸಮಿತಿಯುವರ ಔದಾರ್ಯದಿಂದ ನನ್ನೀ ಎರಡನೇ ಪುಸ್ತಕವು ಕನ್ನಡಿಗರ ಮುಂದೆ ಅಂಬೆಗಾಲಿಕ್ಕುತ್ತ ಬರಲು ಅನುವಾಯಿತು. ಎಲ್ಲಕ್ಕೂ ಮೊದಲು ೨೦–೨೨ ವರ್ಷಗಳಾಚೆ ಲಾಲಾ ಹರವಿಲಾಸ ಶಾರದಾ ಅವರ Hindu Superiority ಎಂಬ ಪುಸ್ತಕವು ನನ್ನ ಕಣ್ಣಿಗೆ ಬಿದ್ದಾಗಲೇ ಅದನ್ನು ಕನ್ನಡಿಸಬೇಕೆಂದು ಬಲು ದಿನದ ನನ್ನ ಹರಕೆಯೇನೋ ಇತ್ತು; ಅದಕ್ಕನುಗುಣವಾಗಿ, ಶಿಕ್ಷಣ ಸಮಿತಿಯುವರಾದರೂ ಆ ಪುಸ್ತಕದ ಬೆಲೆಯನ್ನರಿತು ನನಗೆ ಬರೆಯಲು ಅಪ್ಪಣೆ ಕೊಟ್ಟರು. ಶ್ರೀಶಾರದಾ ಅವರ ಪುಸ್ತಕದ ಭಾಷಾಂತರವೇ ೧೯೧೪–೧೫ ಇಸ್ವಿಯಲ್ಲಿ ಹುಬ್ಬಳ್ಳಿಯಲ್ಲಿ ಹೊರಡುತ್ತಿದ್ದ ಸಚಿತ್ರಭಾರತದಲ್ಲಿ ಕೆಲಮಟ್ಟಿಗೆ ಪ್ರಸಿದ್ಧವಾಗಿದ್ದರೂ, ಅದು ಪೂರ್ಣವಾಗಿರಲ್ಲಿಲ್ಲ; ಶ್ರೀಶಾರದಾ ಅವರು ತಮ್ಮ ಪುಸ್ತಕದಲ್ಲಿ ಭಾರತೀಯ ಶ್ರೇಷ್ಠತ್ವವನ್ನು ಸಿದ್ಧಗೊಳಿಸಲು ಬರಿಯ ಪಾಶ್ಚಿಮಾತ್ಯರ ನುಡಿಗಳನ್ನೇ ಸಾಕ್ಷಿಯಾಗಿ ಕೊಟ್ಟದ್ದರಿಂದ, ಯಾರಿಗಾದರೂ ಇಂಥ ಪುಸ್ತಕವನ್ನೋದುವ ಚಪಲವಾಗುವದು ಸಹಜವು. ನಮ್ಮದನ್ನು ನಾವೇ ಹೀನೈಸುವಂಥ ಈಗಿನ ಹುಚ್ಚುಕಾಲದಲ್ಲಿ ‘ನಮ್ಮ ಅಕ್ಕಸಾಲಿಗರಾದ’ ಪಾಶ್ಚಿಮಾತ್ಯರಿಂದಲೇ ಸುಶಿಕ್ಷತರಾದ ನಮ್ಮವರ ಕಿವಿಹಿಂಡಿಸುವದು ಒಂದು ಬಗೆಯಿಂದ ಪರಿಣಾಮಕರವೆಂದು ಯಾರೂ ಅನ್ನದಿರಲಾರರು; ಮತ್ತು ಈ ದೃಷ್ಟಿಯಿಂದಲೇ ನಾನಾದರೂ ಶ್ರೀಶಾರದಾ ಅವರ ಪುಸ್ತಕವಾದ ಮೇಲೆ ಇತ್ತೀಚೆ ೨೦–೨೨ ವರ್ಷಗಳಲ್ಲಿ ಆದ ಮತ್ತೆ ಕೆಲ ಹೊಸ ಪಾಶ್ಚಾತ್ಯ ಗ್ರಂಥಕರ್ತರ ಗ್ರಂಥಗಳನ್ನು ಓದಿ ಆದಷ್ಟು ಮಟ್ಟಿಗೆ ಎಲ್ಲ ಜನಾಂಗದ ಪ್ರಾತಿನಿಧಿಕ ಮತಗಳನ್ನೇ ಸೇರಿಸಲು ಯತ್ನಿಸಿರುವೆ.

ಸಮುದ್ರಪಯಣ, ವ್ಯಾಪಾರ, ಪರದೇಶಗಳಲ್ಲಿ ಒಕ್ಕಲಾಗುವಿಕೆ, ಇವೇ ಈ ಕಾಲದ ಮುಖ್ಯ ವೈಶಿಷ್ಟ್ಯಗಳು; ಆದರೆ ಅವುಗಳಲ್ಲಿ ನಮ್ಮ ಹಿರಿಯರು ಕೂಡ ಹಲವು ಶತಮಾನಗಳಾಚೆ ಎಷ್ಟು ಮುಂದರಿದಿದ್ದರೆಂಬುದೇ ಈ ಪುಸ್ತಕದೊಳಗಿನ ಮುಖ್ಯ ಚಿತ್ತಾಕರ್ಷಕವಾದ ವಿಷಯವಾಗಿದೆ; ಅದನ್ನೆಲ್ಲ ಓದಿದರೆ, ವಾಚಕರಿಗೆ ಹೊಸವಿಷಯವನ್ನು ತಿಳಿದಷ್ಟು ಸಂತೋಷವಾಗುವಲ್ಲಿ ಸಂಶಯವಿಲ್ಲ. ಪಾಶ್ಚಾತ್ಯರ ಒಡನಾಟ ಲಭಿಸಿರುವ ಈಗಿನಂತಹ ಚಿನ್ನಗಾಲದಲ್ಲಿಯೂ ನಾವು ಹುಚ್ಚು ಧರ್ಮಕ್ಕೆ ಬಲಿಬಿದ್ದು ರಾಷ್ಟ್ರಘಾತ ಮಾಡಿಕೊಳ್ಳದೆ, **कृण्वंतो विश्वमार्यं** ಎಂದು ಇಡೀ ವಿಶ್ವವನ್ನೇ ಆರ್ಯಗೊಳಿಸುವ ಆರ್ಯರ ಹೊಸಚೈತನ್ಯದಿಂದ ಹುರಿಗೊಳ್ಳಲಿಕ್ಕೆಬೇಕು.

ಈ ಪುಸ್ತಕದಲ್ಲಿ ಪಾಶ್ಚಾತ್ಯರ ವಿಚಾರಗಳನ್ನು ಬಹು ಮಟ್ಟಿಗೆ ಸೌಮ್ಯ ಶಬ್ದಗಳಲ್ಲಿ ಕನ್ನಡಿಸಿರುವೆನೇ ಹೊರ್ತು ಅತಿಗೊಳಿಸಿಲ್ಲ. ಹೊಸ ಭಾರತವನ್ನು ನಿರ್ಮಿಸುವ ಹೊಸ ಭಾರತೀಯರ ಕಲ್ಪನೆಯು ಇದರಿಂದ ಹೆಚ್ಚು ಉಜ್ವಲವಾಗಲೆಂದು ಹಾರೈಸುವ—

ಧಾರವಾಡ.
ತಾ. ೧೭-೧೧-೫೧

**ನಾರಾಯಣ ಶರ್ಮಾ.**

# ಪರಿವಿಡಿ.

# ೧ನೆಯ ಪ್ರಕರಣವು

---

## ಭಾರತೀಯರ ಮೇಲ್ಮೆ.

---

**गायन्ति देवाः किल गीतकानि ।**
**धन्यास्तु ते भारत भूमि भागे ॥** (श्रीमद्भागवतम्)

### ಪ್ರಾಸ್ತಾವಿಕ ಮತಗಳು

ಜಗತ್ತಿನ ಇತಿಹಾಸದೊಳಗೆ ಹಿಂದುಸ್ಥಾನದ ಇತಿಹಾಸವು ಎಲ್ಲಕ್ಕೂ ಮೇಲಾದ ಸ್ಥಾನವನ್ನು ಪಡೆದಿದೆ. ಇತಿಹಾಸವು ಪ್ರಾರಂಭವಾದಂದಿನಿಂದ ಇಂದಿನವರೆಗೂ ಜಗತ್ತಿನ ಮಹತ್ವವನ್ನು ಹೆಚ್ಚಿಸುವಂಥ ಪ್ರತಿಯೊಂದು ಸಂಗತಿಗಳಿಗೆ ಒಂದಿಲ್ಲೊಂದು ಬಗೆಯಿಂದ ಹಿಂದುಸ್ಥಾನವು ಸಂಬಂಧಿಸಿರುವದು. ಜಗದಲ್ಲೆಲ್ಲಿಯೂ ಕಾಣದಂಥ ನಾನಾವಿಧವೂ, ಹಿತಕರವೂ ಆದ ಇಲ್ಲಿಯ ಹವೆ, ಹುಲುಸಾದ ಭೂಮಿ, ಉಪಯುಕ್ತವೂ ವಿಪುಲವೂ ಆಗಿರುವ ಪ್ರಾಣಿಕೋಟಿ ಹಾಗೂ ವನಸ್ಪತಿಕೋಟಿ, ಇವೆಲ್ಲವುಗಳನ್ನು ನೋಡಿದರೆ, ನಿಸರ್ಗದೇವತೆಯು ತನ್ನ ಒಡಲಲ್ಲಿರುವ ಅಸ್ವಾದೃಶವಾದ ವಸ್ತುಗಳನ್ನೆಲ್ಲ ಹಿಂದೂದೇಶಕ್ಕೇ ಒಲಿದುಕೊಟ್ಟು, ಮಾನವಜಾತಿಯ ಇತಿಹಾಸದೊಳಗೆ ಭಾರತವು ಎಲ್ಲ ಜನಾಂಗಗಳಿಗೂ ಮಾರ್ಗದರ್ಶಿಯಾಗಬೇಕಾಗಿ ಸಂಕಲ್ಪಿಸಿರುವಂತೆ ಕಾಣಿಸುತ್ತದೆ. ಈ ಬಗ್ಗೆ ಪ್ರಾಚೀನರೂ ಆಧುನಿಕರೂ ಆದ ಪಾಶ್ಚಾತ್ಯರ ಬಾಯಿಂದ ಹೊರಟ ಉದ್ಗಾರಗಳ ಪ್ರಮಾಣಗಳನ್ನು ಕೊಡುವೆವು.

**ಮಿ. ಮ್ಯುರೆಸಾಹೇಬರು:—** "ಪಾಶ್ಚಾತ್ಯರಿಗಂತೂ ಹಿಂದುಸ್ಥಾನದ ಹೆಸರು ನೆನಪಾದೊಡನೆ ಥಳಥಳಿಸುವ ಭಂಗಾರ-ಮುತ್ತುರತ್ನ, ಮಘಮಘಿಸುವ ನಾನಾತರದ ಸುವಾಸನೆಯ ಹೂವು ಇವುಗಳೇ ಜ್ಞಾಪಕಕ್ಕೆ ಬರುತ್ತವೆ. ಹಿಂದೂ ದೇಶದಲ್ಲಿ ಕಂಡುಬರುವಂಥ ವೈಭವವುಳ್ಳ ವನ ಸೌಂದರ್ಯವೂ, ಭೂಮಿಯಲ್ಲಿ ಹುಟ್ಟುವ ಬೆಲೆಯುಳ್ಳ ವಸ್ತುಗಳೂ ನಮಗಿನ್ನಾವ ದೇಶದಲ್ಲಿಯೂ ಕಾಣವು."

**ಇತಿಹಾಸಗಾರರಾದ ಅಬ್ದುಲ್ಲಾ ವಾಸಫರು ಅನ್ನುವದು:—** ಜಗದೊಳಗಿರುವ ಈಗಿನ ಬರಹಗಾರರ ಅಭಿಪ್ರಾಯವನ್ನು ಲಕ್ಷಿಸಿದರೆ, ಪೃಥಿ

ಯಲ್ಲಿಂಥ ಸುಖಕರವಾದ ನಾಡು ಮತ್ತೊಂದಿಲ್ಲವೆಂದೇ ಒಡೆದು ಕಾಣುತ್ತದೆ. ಇಲ್ಲಿಯ ಮಣ್ಣು ಹವೆಗಿಂತ ಪವಿತ್ರವು; ಹವೆಯಂತೂ ಸಾಕ್ಷಾತ್ ಪಾವಿತ್ರ್ಯವೇ ಆಗಿದೆ. ಕಣ್ಣಿಗೆ ಹಬ್ಬಮಾಡುವ ಇಲ್ಲಿಯ ವಿಶಾಲವಾದ ರಮ್ಯ ಬೈಲುಗಳನ್ನು ನೋಡಿದರೆ, ಅದೊಂದು ಭೂಸ್ವರ್ಗವೆಂದೇ ಎನಿಸುತ್ತದೆ.

ಒಟ್ಟಾರೆ, ಭಾರತವೆಂದರೆ ಜಗತ್ತಿನಲ್ಲಿರುವ ಅತ್ಯುತ್ತಮವಾದ ವಸ್ತುಗಳನ್ನೊಳಗೊಂಡಿರುವ ಚಿಕ್ಕ ವಸ್ತುಸಂಗ್ರಹಾಲಯವೇ ಸರಿ!

**ಪ್ರೊ. ಮ್ಯಾಕ್ಸಮುಲ್ಲರರು:—** "ಮನುಷ್ಯಜಾತಿಯ ಮನೋವಿಕಾಸದ ಚರಿತ್ರೆಯನ್ನು ನಾವು ಸೂಕ್ಷ್ಮವಾಗಿ ಅವಲೋಕಿಸಿದರೆ, ಜಗತ್ತಿನೊಳಗಿರುವ ಯಾವ ಜನಾಂಗಕ್ಕೂ ಹಿಂದೂದೇಶವೇ ಶ್ರೇಷ್ಠವೆಂದು ಮನವರಿಕೆಯಾಗುವದು. ಮನುಷ್ಯನ ಮನಸಿನ ಆಟಗಳಾದ ಭಾಷೆ, ಧರ್ಮ, ಪುರಾಣ, ತತ್ವಶಾಸ್ತ್ರ ಸಮಾಜಶಾಸ್ತ್ರ, ನೀತಿಶಾಸ್ತ್ರ, ಕಲಾಶಾಸ್ತ್ರ, ವಿಜ್ಞಾನಶಾಸ್ತ್ರ, ಮುಂತಾದವುಗಳನ್ನು ನಿರೀಕ್ಷಿಸಿದರೆ, ಮನುಷ್ಯನ ಇತಿಹಾಸದೊಳಗೆ ಕಂಡುಬರುವ ಅಸಂಖ್ಯ ಮತ್ತು ಅಮೂಲ್ಯ ಸಂಗತಿಗಳು ಹಿಂದುಸ್ಥಾನದಲ್ಲಿಷ್ಟೇ ಮಾತ್ರ ಅಡಕವಾಗಿರುವವಾಗಿ ಯಾರಿಗಾದರೂ ಮನಗಾಣದಿರದು."

**ಕಲಕತ್ತೆಯ ರಿವ್ಹ್ಯೂ:—** ಎಂಬುವ ಮಾಸ ಪತ್ರಿಕೆಯಲ್ಲಿ ಅದರ ಸಂಪಾದಕರು ಬರೆಯುವದು:— ಈಗ ಎಲ್ಲ ಬಗೆಯಿಂದ ಹಿಂದೂದೇಶವು ಕೀಳಾದ ಸ್ಥಿತಿಗೀಡಾಗಿದ್ದರೂ, ಒಂದಾನೊಂದು ಕಾಲಕ್ಕೆ ಹಿಂದೂ ಜನರು ಶಸ್ತ್ರಾಸ್ತ್ರ, ಚಿತ್ರ ಮುಂತಾದ ಕಲೆಗಳಲ್ಲಿ ಪ್ರವೀಣರೂ, ರಾಜ್ಯಾಡಳಿತದಲ್ಲಿ ಗಟ್ಟಿಗರೂ, ಶಾಸನ ಪದ್ಧತಿಯಲ್ಲಿ ನಿಪುಣರೂ ಎಲ್ಲರನ್ನು ಮೀರಿದವರೂ ಆಗಿದ್ದರು.

**ಮಿ. ಥಾರ್ನಟನ್ನರು:—** "ಭಾರತೀಯರ ರಾಜ್ಯ ಪದ್ಧತಿಯು ಅತ್ಯಂತ ವೈಭವವುಳ್ಳದ್ದಾಗಿದ್ದಿತು."

**ಕರ್ನಲ್ ಟಾಡರು:—** "ಗ್ರೀಕರ ತತ್ವಶಾಸ್ತ್ರ ಪದ್ಧತಿಗಳನ್ನು ಮೀರಿಸುವಂಥ ಶಾಸ್ತ್ರಗಳನ್ನು ಬರೆದು, ಪ್ಲೇಟೊ, ಥೇಲ್ಸ, ಪಾಯಥಾಗೋರಾಸರಂಥವರನ್ನು ತಮ್ಮ ಶಿಷ್ಯರನ್ನಾಗಿಸಿದ ಆ ಋಷಿಗಳನ್ನೂ, ತಮ್ಮ ಜ್ಯೋತಿಷಶಾಸ್ತ್ರ ಪದ್ಧತಿಯಿಂದ ಯುರೋಪವನ್ನೇ ಬೆರಗುಗೊಳಿಸಿದ ಆ ಜ್ಯೋತಿಜ್ಞರನ್ನೂ, ತಮ್ಮ ಶಿಲ್ಪಕಲಾ ಚಾತುರ್ಯದಿಂದ ಹುಚ್ಚು ಹಿಡಿಸಿದ

ಶಿಲ್ಪಿಗರನ್ನೂ, ತಮ್ಮ ವಿವಿಧ ರಾಗಗಳ ಆಲಾಪನೆಗಳೊಡನೆ ಕೇಳುವವರ ಮನಸ್ಸುಗಳನ್ನು ಪ್ರೊಯನ್ನಾಪಿಸಿ, ಈ ಕ್ಷಣಕ್ಕೆ ಆನಂದ, ಇನ್ನೊಂದು ಕ್ಷಣಕ್ಕೆ ಶೋಕ ಮತ್ತೊಂದು ಕ್ಷಣಕ್ಕೆ ಶೌರ್ಯ ಮುಂತಾದ ರಸಗಳಲ್ಲಿ ಮುಳುಗೇಳಿಸುವ ಸಂಗೀತಗಾರರನ್ನೂ ಹಿಂದುಸ್ಥಾನದಲ್ಲಲ್ಲದೆ ಇನ್ನೆಲ್ಲಿ ಕಾಣುವದು ಸಾಧ್ಯವು ? ”

ಫ್ರೆಂಚನೊಬ್ಬನು ಹಿಂದೂದೇಶದ ವಿಷಯದಲ್ಲಿ ಅತಿ ಪೂಜ್ಯಭಾವನೆಯಿಂದ ಉಸುರಿದ್ದು:—“ ಅತುಲವಾದ ಕಲೆ ಹಾಗೂ ತತ್ವಶಾಸ್ತ್ರಗಳ ಬೆಡಗಿನಿಂದ ಬೆಳಗುವ ಭಾರತವೇ! ಭಯಭಕ್ತಿಯಿಂದ ನಿನ್ನ ನಾ ವಂದಿಸುವೆನೀಗ. ನಿನ್ನುದರದಲ್ಲಿ ಜನಿಸಿದ ಪ್ರತಿಭಾವಂತರ ಮುಂದೆ ಈಗಲೂ ಪಶ್ಚಿಮಖಂಡವು ಬಾಗುತ್ತಿದೆ; ಪ್ರಪಂಚದ ದಂದುಗದಿಂದ ತತ್ತರಿಸುತ್ತ ಅಧೋಗತಿಗಿಳಿಯುತ್ತಿರುವ ಕ್ಷುದ್ರ ಮತ್ತು ರಾಷ್ಟ್ರಸಂಹಾರಕವಾದ ಪಶ್ಚಿಮ ಖಂಡವು ನಿನ್ನ ಪ್ರಬೋಧದಿಂದಾದರೂ ಕಣ್ದೆರೆಯಲಿ!”

ಹಿಂದೂದೇಶದ ಹಳೆಯ ವೈಭವದ ಹಾಳುರಗಳೆಯನ್ನೇ ನೆನಿಸಿ ಹಾಡುವದರಲ್ಲೇನು ? ಈಗಿದ್ದುದೇ ನಿಜವೆಂದು ಯಾರಾದರೂ ಆಕ್ಷೇಪಿಸಬಹುದು; ಹೀಗೆ ಆಕ್ಷೇಪಿಸುವದರಿಂದ ಭಾರತೀಯರ ಒಳ-ಜೀವನದ ಬಗ್ಗೆಯೂ, ಆರ್ಯಸಮಾಜವೆಂಬ ಕಟ್ಟಡವು ಯಾವ ತತ್ವಗಳ ಮೇಲೆ ಕಟ್ಟಲ್ಪಟ್ಟಿರುವದೋ ಆ ತತ್ವಗಳ ಬಗ್ಗೆಯೂ, ಅಜ್ಞಾನ ತೋರ್ಪಡಿಸಿದಂತಾಗುತ್ತದಲ್ಲದೆ ಬೇರೆ ಇಲ್ಲ. ಭಾರತೀಯರಿಗೆ ಆ ದಿವ್ಯಭೂತಕಾಲವೆಂಬುದು ಕಣ್ಮರೆಯಾಗದು. ಅವರು ದಿನಾಲು ವೇದೋಪನಿಷತ್ ಹಾಗೂ ರಾಮಾಯಣ ಮಹಾಭಾರತಗಳೊಂದಿಗೆ ಒಂದಿಲ್ಲೊಂದು ಪರಿಯಿಂದ ಒಂದಾಗುತ್ತಿರುವದರಿಂದ ವರ್ತಮಾನಕಾಲದಲ್ಲಿಯೂ ಕೆಲಸಮಾಡುವ ಹುರುಪು ಅವರಿಗುಂಟಾಗುತ್ತದೆ; ಅವರನ್ನು ಕರ್ಮಕ್ಕೆ ಪ್ರವೃತ್ತರನ್ನಾಗಿ ಮಾಡುವ ಸೆಲೆಯೂ, ಮುಂದಿನವರಿಗಾಗಿ ಕೆಲಸ ಮಾಡಬೇಕೆಂಬುವ ಆಸೆಯನ್ನು ಹುಟ್ಟಿಸುವ ಸಾಮರ್ಥ್ಯವೂ, ಆ ಪ್ರಾಚೀನ ಕಾಲದಲ್ಲಿದೆ; ವೈಭವಯುಕ್ತವಾದ ಆ ಪ್ರಾಚೀನಕಾಲದ ಮಹಿಮೆಯನ್ನು ನಿಜವಾಗಿ ಅರಿತು ಅಡಿಯಿಟ್ಟರೆ, ಮುಂದಾದರೂ ಭಾರತೀಯರಿಗೆ ಮುಂಚಿನ ಆ ಸ್ವರ್ಗೀಯ ಸುಖದ ಸುಗ್ಗಿಯ ಕಾಲವೇ ಬಾರದಿರದು.

**ಪಾರೀಸದ ಪ್ರೊ. ಸಿಲ್ವನ್‌ಲೆವ್ಹಿಯವರು:–** ಕಲಕತ್ತೆಯ ಡಾಕ್ಟರ ಪಿ. ಸಿ. ರಾಯರಿಗೆ ಬರೆದ ಒಂದು ಕಾಗದದಲ್ಲಿ "ಹಿಂದೂಜನರ ಮಾನಸಿಕ ಹಾಗು ನೈತಿಕ ಸುಧಾರಣೆಯಾಗುವದಿದ್ದರೆ, ಅದು ಕೇವಲ ರಾಷ್ಟ್ರಭಾಷೆಯ ಅಭ್ಯಾಸದಿಂದಲೂ, ರಾಷ್ಟ್ರೀಯನೀತಿ ಹಾಗೂ ಸಂಪ್ರದಾಯಗಳ ಅಭ್ಯಾಸ ದಿಂದಲೂ, ಸಾಧ್ಯವೇ ಹೊರತು ಮಿಕ್ಕದರಿಂದಲ್ಲ" ವೆಂದು ನುಡಿದಿರುವರು.

**ಮಿ. ಸ್ಯಾಮ್ಯುಯಲ್‌ಸ್ಮಾಯಿಲ್ಸರು:–**"ವ್ಯಕ್ತಿಗಳಂತೆ, ಜನಾಂಗ ಗಳಿಗಾದರೂ ತಮ್ಮ ಜಾತಿಯ ಅಭಿಮಾನದಿಂದಲೇ ಹಿರಿಯರ ದೊಡ್ಡಸ್ತಿಕೆ ಯಿಂದಲೇ, ಬಲವುಂಟಾಗುತ್ತದೆ. ಅದು ವರ್ತಮಾನ ಕಾಲವನ್ನು ಸ್ಥಿರಗೊಳಿ ಸುವದಲ್ಲದೆ, ಏಳಿಗೆ–ಬೆಳಿಗೆಗಳನ್ನುಂಟು ಮಾಡುತ್ತದೆ."

ಆದುದರಿಂದ ಹಿಂದೂ ಜನರು ತಮ್ಮ ಜನಾಂಗದ ಚರಿತ್ರೆಯನ್ನರಿಯು ವದೂ, ಅದನ್ನು ಓದಿ ಬೋಧಿಸಿಕೊಳ್ಳುವದೂ ಅತ್ಯಗತ್ಯ. ಭಾರತೀಯರ ಇತಿಹಾಸವೆಂಬ ಜ್ಯೋತಿಯಿಂದಲೇ ಏಸಿಯ–ಯುರೋಪಗಳಿಗೆ ಬೆಳಕು ದೊರೆಯಿತು.

ಆ ಮಾತಿಗೆ ಸಾವಿರಾರು ವರ್ಷಗಳು ಕಳೆದವು; ಗ್ರಂಥಾಂತರಗಳಲ್ಲಿ ಇಣಿಕಿಹಾಕಿದರೆ ಮಸಮಸಕಾಗಿ ಪ್ರಾಚೀನಕಾಲದ ವೀರಮಣಿಗಳು ಜರ ಗಿಸಿದ ವೀರಗೆಲಸಗಳು ನಮ್ಮ ಕಣ್ಣಿಗೆ ಕಾಣಿಸಬಹುದು. ಎಷ್ಟೋ ವಿಷಯ ಗಳು ಮರೆತು ಹೋಗಿವೆ! ಎಷ್ಟೋ ಸಂಗತಿಗಳು ಉಪೇಕ್ಷೆಯಿಂದ ಕಾಲನ ದವಡೆಗೀಡಾಗಿವೆ. ಈಗ ನಮ್ಮ ಪಾಲಿಗೆ ಕಳೆದುಳಿದ ಹರಕು–ಮುರಕ ಕೆಲ ಸಂಗತಿಗಳು ಮಾತ್ರ.!

ಒಂದೊಂದು ಜನಾಂಗವು ಒಂದೊಂದು ದೃಷ್ಟಿಯಿಂದ ಶ್ರೇಷ್ಠವಾಗು ವದುಂಟು; ಆದರೆ ಹಿಂದೂ ದೇಶದ ಮಾತು ಹಾಗಲ್ಲ. ಜನಾಂಗದ ಆಸಂಖ್ಯ ಬೌದ್ಧಿಕ ಚಟುವಟಿಕೆಗಳಾದ ವಾಙ್ಮಯ, ಕಾವ್ಯ, ಸಂಗೀತ, ಚಿತ್ರ, ತತ್ವ, ವ್ಯಾಪಾರಮುಂತಾದ ವಿಷಯಗಳಲ್ಲಿ ಹಿಂದುಗಳ ಕೈಹಿಡಿಯುವವರು ಯಾರೂ ಇರಲಿಲ್ಲ. ಯುರೋಪಿಯ ಪಂಡಿತರು "ಭಾರತೀಯ ಸಂಸ್ಕೃತಿಯು ಸುಧಾ ರಿಸಿರುವ ಪ್ರತಿಯೊಂದು ಜನಾಂಗದ ಮೂಲೆಕೊಂಪೆಯಲ್ಲಿಯೂ, ಅದರ ಸುತ್ತುಮುತ್ತಲೂ ದಿನಾಲು ಸುಳಿಯುತ್ತಿರುವದು" ಎಂದು ಅನ್ನುವದುಂಟು.

ಈಗಿನಂಥ ರಾಜಕೀಯ ಆಪತ್ತಿಯಲ್ಲಿಯೂ, ಸಾಮಾಜಿಕ ವಿಪ್ಲವದ

ಲ್ಲಿಯೂ, ಜಾತಿಯ ಪಾತ್ಸರ್ಯದ ಮೇಲಾಟದಲ್ಲಿಯೂ ಆ ಪ್ರಾಚೀನ ಹಿಂದೂಗಳ ಸಂಸ್ಕೃತಿಯೂ, ಸಂಸ್ಕೃತಿಯೊಳಗಿನ ಜೀವನ ರಸವೂ ಗಾಂಭೀರ್ಯವೂ ಹಿಂದೂ ಜನರನ್ನು ಕಷ್ಟಸಹಿಸಲು ಗಟ್ಟಿಗರನ್ನಾಗಿ ಮಾಡಲು ಕಾರಣವಾಗಿವೆಯೆಂದೂ ನಿಃಸಂದೇಹವಾಗಿ ಹೇಳಬಹುದು. ಇದೀಗ ಹಿಂದುತ್ವದ ಸತ್ವಸಾರವು! ಇಂಥ ಎಡರುಗಳೇ ಇಜಿಪ್ತ್, ಅಸೀರಿಯಾ, ಫಿನಿಶಿಯಾ ಮುಂತಾದ ಪ್ರಾಚೀನಕಾಲದ ದೇಶಗಳನ್ನು ಮುತ್ತಿದಾಗ ಅವುಗಳ ಹೊಡೆತಕ್ಕೆ ಅವು ನಿರ್ನಾಮವಾದವು; ಗ್ರೀಕ, ರೋಮ, ಪರ್ಶಿಯದ ಸಾಮ್ರಾಜ್ಯಗಳು ಮಣ್ಣುಮುಕ್ಕಿದವು.

ಆರ್ಯ-ಸಂಸ್ಕೃತಿ ಸೂರ್ಯಪ್ರಕಾಶವೆಂಬುವದು ಅಗಾಧವಾದುದು. ಅದು ಅಂಧಕಾರವನ್ನು ಎಬ್ಬಟ್ಟಿ ದಿಗ್ದೇಶವನ್ನೆಲ್ಲ ಬೆಳಗಿ, ಜಗತ್ತಿನಲ್ಲಿರುವ ಜನರಿಗೆ ಸುಖ-ಸಾಮ್ರಾಜ್ಯಗಳನ್ನು ಕೊಟ್ಟು, ಅಮರಗೊಳಿಸುವದು.

**ಪ್ರೊ. ಮ್ಯಾಕ್ಸಮುಲ್ಲರ ಸಾಹೇಬರು —** "ಜಗದೊಳಗಿನ ಎಲ್ಲ ದೇಶಗಳಲ್ಲಿ ಯಾವ ಜನಾಂಗವು ಸಂಪತ್ತಿ, ಸಾಮರ್ಥ್ಯ ಹಾಗೂ ಸೌಂದರ್ಯಗಳಿಂದ ಬೆಳಗುತ್ತಿರುವದೆಂದು ಹುಡುಕಲು ಹೊರಟರೆ ಭೂಲೋಕದಲ್ಲಿಯ ಸ್ವರ್ಗವಾದ ಹಿಂದುಸ್ಥಾನವೆಂಬೇ ನನಗೆ ಕಾಣಿಸುವದು; ಈ ಭೂಮಂಡಲದಲ್ಲಿಯ ಯಾವ ಲೋಕದಲ್ಲಿ ಮಾನವೀ ಮನಸು ದೇವದತ್ತವಾದ ತನ್ನಲ್ಲಿಯ ಅಂತ:ಶಕ್ತಿಗಳನ್ನು ಸಂಪೂರ್ಣವಾಗಿ ಬೆಳಸಿಕೊಂಡು ಜೀವನದ ಅತಿಗಹನವಾದ ಸಮಸ್ಯೆಗಳನ್ನು ಕುರಿತು ಆಳವಾಗಿ ವಿಚಾರಿಸಿ ಕ್ಯಾಂಟ, ಪ್ಲೇಟೋನ ಗ್ರಂಥಗಳನ್ನೋದಿದವರಿಗೂ ಕೂಡ ಬೆರಗುಗೊಳಿಸುವಂಥ ಸಿದ್ಧಾಂತಗಳನ್ನು ಅದರಿಂದ ಹೊರಪಡಿಸಿರುವದೆಂದು ಕೇಳಿದರೆ ನಾನು ಹಿಂದುಸ್ಥಾನವನ್ನೇ ಬೊಟ್ಟುಮಾಡಿ ತೋರಿಸುವೆ; ಸಂಪೂರ್ಣವಾಗಿ, ಗ್ರೀಕ, ರೋಮನರ ವಿಚಾರಗಳಿಂದಲೇ ಪುಷ್ಟವಾಗಿರುವ ಯುರೋಪದಿಂದ ನಮ್ಮ ಅಧ್ಯಾತ್ಮ ಜೀವನವು ಹೆಚ್ಚು ಪರಿಪೂರ್ಣ, ಹೆಚ್ಚು ವ್ಯಾಪಕ, ಹೆಚ್ಚು ವಿಶ್ವತೋಮುಖ ಅಂದರೆ ನಿಜವಾಗಿಯೂ ರೂಪಾಂತರಿತ ಹಾಗೂ ಶಾಶ್ವತ ಜೀವನವಾಗಬೇಕೆಂದರೆ, ಯಾರವಾಙ್ಮಯದಿಂದ ಸ್ಫೂರ್ತಿಗೊಂಡೆವೋ ಆ ಹಿಂದುಸ್ಥಾನದ ಕಡೆಗೇ ಬೆರಳು ಮಾಡಿ ತೋರಿಸುವೆ."

---

# ೨ ನೆಯ ಪ್ರಕರಣ

## ಆರ್ಯಸಂಸ್ಕೃತಿಯ ಪ್ರಾಚೀನತ್ವ.

**ಜಗತ್ತಿನೊಳಗಿನ ದೇಶಗಳಿಗೆಲ್ಲ ಭೋಗಭೂಮಿ ಎಂದು ಹೆಸರಿದ್ದರೆ, ಹಿಂದುಸ್ಥಾನಕ್ಕೆ ಕರ್ಮಭೂಮಿ ಎಂಬುವ ಹೆಸರುಂಟು; ಈ ಹೊತ್ತಿಗೆ ಹಿಂದುಸ್ಥಾನದಲ್ಲಿ ನಾವು ಸಾವಿರಾರು ವರ್ಷದ ಜೀವನ ಕ್ರಮವನ್ನು ನೋಡಬಹುದು.** —ಸರ ಜಾನ್ ಉಡ್ರೋಫ

ಸೃಷ್ಟಿಯು ಹುಟ್ಟಿ ಲಕ್ಷಗಟ್ಟಲೆ ವರ್ಷಗಳಾದವೆಂದು ಎಣಿಸುವದುಂಟು. ಜಗತ್ತಿನೊಳಗೆ ಅತೀ ಪ್ರಾಚೀನ ರಾಷ್ಟ್ರವೆಂದರೆ ಹಿಂದೂ ದೇಶವು. ಹಿಂದೂ ರಾಷ್ಟ್ರದ–ಜೀವನವು ಬಹು ಸೋಜಿಗವಾದುದಾಗಿದೆ. ಹಿಂದೂ ರಾಷ್ಟ್ರದ ಸಂಸ್ಕೃತಿಯಷ್ಟು ಪುರಾತನವಾದುದು ಜಗದಲ್ಲಿಲ್ಲ. ಈ ವಿಷಯದಲ್ಲಿ ಹಲವು ಪಾಶ್ಚಾತ್ಯರು ಅನ್ನುವದೇನಂದರೆ:— **ಕಾವ್ರುಂಟ ಜಾರ್ನ ಸ್ಟರ್ನ**– ಧರ್ಮ ಹಾಗೂ ಸಂಸ್ಕೃತಿಗಳ ಪ್ರಾಚೀನತೆಯ ವಿಷಯದಲ್ಲಿ ಹಿಂದೂ ಜನರೊಡನೆ ಬೇರೆ ಯಾವ ಜನಾಂಗದವರೂ ಸರಿಗಟ್ಟಲಾರರು. ಹಿಂದುಗಳ ಜ್ಯೋತಿ:ಶಾಸ್ತ್ರದ ಪ್ರಾಚೀನತೆಯ ಬಗ್ಗೆ ಬರೆಯುವಾಗ ಮೇಲಿನ ಗ್ರಂಥಕಾರನೇ ಅಭಿಪ್ರಾಯಪಡುವದೇನಂದರೆ.– “ ಯೇಸುಕ್ರಿಸ್ತನು ಹುಟ್ಟುವ ಮೊದಲು ೩೦೦೦ ವರ್ಷಗಳಾಚೆಯೇ ಹಿಂದೂ ಜನರು ಜ್ಯೋತಿರ್ಗಣಿತ ರೇಖಾಗಣಿತಗಳಲ್ಲಿ ಬಹು ಪ್ರಾವೀಣ್ಯವನ್ನು ಪಡೆದವರಾಗಿದ್ದರು. ಅವರ ಸಂಸ್ಕೃತಿಯು ಎಂದಿನಿಂದ ಪ್ರಾರಂಭವಾಯಿತೆಂಬುದರ ಲೆಕ್ಕಹತ್ತದು.”

**ಪ್ಲಿನಿಯು:**—“ ಬಕ್ಕ್ಯಾಗಳ ಕಾಲದಿಂದ ಮ್ಯಾಸಿಡೋನಿಯರ ಅಲೆಕ್ಸಾಂಡರನ ಕಾಲದವರೆಗೆ ೧೫೪ ಮಂದಿ ರಾಜರು ಹಿಂದೂದೇಶವನ್ನಾಳಿದರು.”

**ಪ್ರೋ. ಮ್ಯಾಕ್ಸಡಂಕೇರರು.**— ಯುಧಿಷ್ಠಿರ ಶಕವು ಕ್ರಿ. ಶ. ಪೂರ್ವ ೩೧೦೦ ವರ್ಷಗಳ ಸುಮಾರಕ್ಕೆ ಪ್ರಾರಂಭವಾಗಿರಬಹುದು ಎಂದು ನುಡಿದಿರುವರು.

**ಕ್ಯಾಪ್ಟನ್ ಟ್ರಾಯರರು:**— “ ಸುಧಾರಣೆಯಲ್ಲಿ ಮುಂದರಿದ ಸಂಸ್ಥಾನಗಳು ಹಿಂದೂದೇಶದೊಳಗೆ ಕ್ರಿ. ಶ. ಮುಂಚೆ ಮೂರು ಸಾವಿರ ವರ್ಷ

ಗಳಾಚೆ ಇದ್ದವೆಂಬುದನ್ನು ಅಲ್ಲಗಳೆಯಲಾಗದು."

ಮಹಾಭಾರತದಂತೆ ನೋಡಿದರೆ, ಅಯೋಧ್ಯೆಯು ೧೫೦೦ ವರ್ಷಗಳ ವರೆಗೆ ಒಳ್ಳೇ ಅಭ್ಯುದಯ ಸ್ಥಿತಿಯಲ್ಲಿತ್ತು; ತರುವಾಯ ಸಗರರಾಜನ ವಂಶದವನೊಬ್ಬನು ಕನೋಜವನ್ನು ಸ್ಥಾಪಿಸಿದನು; ಅಂದರೆ ಕ್ರಿ. ಶ. ಮುಂಚೆ ೧ ಸಾವಿರ ವರ್ಷದಾಚೆ.

ಪ್ರಾಚೀನ ಹಿಂದೂದೇಶದ ಇತಿಹಾಸವೆಂದರೆ, ಯುಗಯುಗಾಂತರಗಳ ಚರಿತ್ರೆಯಾಗಿದೆ. ಹಿಂದೂ ಸಂಸ್ಕೃತಿಯು ಎಷ್ಟು ಪುರಾತನವಿರುವದೆಂಬುವ ವಿಷಯವಾಗಿ ಒಂದು ಸಬಲವಾದ ಪ್ರಮಾಣವಿದೆ. ಅದನ್ನು ಕುರಿತು—

**ಕಾವುಂಟ ಜಾರ್ನಸ್ಟರ್ನರು ಅನ್ನುವದು:—** ಬ್ಯಾಕ್ಟ್ರಿಯದವರ ವೇದವಾದ ಡವಿಸ್ತಾನದಲ್ಲಿ ಅಲೆಕ್ಸಾಂಡರನು ಹಿಂದುಸ್ಥಾನಕ್ಕೆ ದಂಡೆತ್ತಿ ಬರುವ ಮುಂಚೆ ೩೬೦೦ ವರ್ಷಗಳಾಚೆ ಬ್ಯಾಕ್ಟ್ರಿಯದಲ್ಲಾಳಿದ ಅನೇಕ ಹಿಂದೂ ಅರಸರ ಆಳಿಕೆಯ ಕಾಲವನ್ನು ನೋಡಬಹುದು. ಬ್ಯಾಕ್ಟ್ರಿಯದಲ್ಲಾಳಿದವರೂ ಹಿಂದೂ ಜನರೇ ಎಂಬುದು ಈಗ ಸಿದ್ಧವಾಗಿದೆ. ಈ ಮೇರೆಗೆ ನಾವು ಲೆಕ್ಕ ಹಾಕಿದರೆ, ಹಿಂದುಸ್ಥಾನವು ಕ್ರಿ. ಶಕದಾಚೆ ೬೦೦೦ ವರ್ಷಗಳ ವರೆಗೆ ತನ್ನ ದಿವ್ಯ ಸಂಸ್ಕೃತಿಯ ಆನಂದಾನುಭವದಲ್ಲಿಯೇ ಕಾಲಕಳೆಯಿತೆಂದು ಸ್ಪಷ್ಟ ವಾಗುತ್ತದೆ; ಮುಂದೆ ಮುಂದಂತೂ ಉದಯಕ್ಕೆ ಬಂದ ಗ್ರೀಸ, ಇಜಿಪ್ತ, ಪರ್ಶಿಯಾ, ಅಮೇರಿಕಾ ಚೀನ, ಮುಂತಾದ ದೂರಿನ ನಾಡುಗಳಿಗೆ ಆರ್ಯರೇ ಹೋಗಿ ವಾಸವಾಗಿದ್ದು ಅಲ್ಲಿ ತಮ್ಮ ಸಂಸ್ಕೃತಿಯನ್ನು ನೆಟ್ಟ ರೆಂದೂ, ಈ ಸಂಸ್ಕೃತಿಯ ತೇಜಸ್ಸಿನಿಂದಲೇ ಅವರು ಮುಂದೆ ಜಗತ್ತಿನಲ್ಲಿ ತಮ್ಮ ಪ್ರಭೆಯನ್ನು ಬೆಳಗಿದರೆಂದೂ ಇತಿಹಾಸಜ್ಞರಿಗೆ ಗೊತ್ತಿದೆ. ಅರ್ಥಾತ್ ಮೇಲಿನ ಜನಾಂಗಗಳಿಗೆ ಆರ್ಯರಿಂದಲೇ ಸಂಸ್ಕೃತಿಯೂ ಧರ್ಮವೂ ದೊರೆತವೆಂಬುದನ್ನು ಯಾರಾದರೂ ಒಪ್ಪತಕ್ಕ ಮಾತು.

ಆರ್ಯರ ನಾಣ್ಯ ಪದ್ಧತಿಯು ದೆಸೆಯಿಂದ ಬರೆಯುವಾಗ

**ಮಿ. ಪ್ರಿನ್ಸೆಪ್ ಎಂಬುವರು ಅನ್ನುವದು:—** ಕ್ರಿ. ಶ. ಪೂರ್ವ ೮೦೦ ವರ್ಷಗಳಾಚೆ ಆರ್ಯರಿಗೆ ನಾಣ್ಯಪದ್ಧತಿಯ ಸಂಪೂರ್ಣ ಜ್ಞಾನವಿದ್ದು ಕೊಡುಕೊಳ್ಳುವ ವ್ಯವಹಾರಕ್ಕೆ ಅನುವಾಗಬೇಕೆಂದು ಬೇರೆಬೇರೆ ಧಾತು ಗಳಿಂದ ಚಿಕ್ಕದೊಡ್ಡ ನಾಣ್ಯಗಳನ್ನು ಕಲ್ಪಿಸಿದ್ದರು.

ವಿಚಾರಮಾಡಿದಂತೆಲ್ಲ ಯುರೋಪಿಯನರಿಗೆ ಹಿಂದುಸ್ಥಾನದ ಪ್ರತಿಯೊಂದು ವಿಷಯವೂ ದಿಗ್ಭ್ರಮೆಗೊಳಿಸುವಷ್ಟು ಆಳವಾಗಿದೆ. ಮಧ್ಯಕಾಲದೊಳಗೆ ಪರದೇಶದಿಂದ ನೂರಾರುಮಂದಿ ಪರಧರ್ಮದ ತಲೆತಿರುಕ ಕಾಡುದಾಳಿಗಾರರು ದಂಡೆತ್ತಿಬಂದು ಹಿಂದೂದೇಶದಲ್ಲಿರುವ ಸಂಪತ್ತಿಯನ್ನು ಸುಲಿದೊಯ್ದರೂ, ಇನ್ನೂ ಬೇಕಾದಷ್ಟು ಅವಶೇಷವು ಉಳಿದುಕೊಂಡಿದೆ. ಅವುಗಳಿಂದಲೇ ನಾವು ಹಿಂದುಸ್ಥಾನದ ಪ್ರಾಚೀನತೆಯನ್ನು ಊಹಿಸಬಹುದು.

ಸ್ನಾನಾದಿಗಳ ಕಾಲಕ್ಕೆ ಪ್ರತಿಯೊಬ್ಬ ಹಿಂದುವು ಉಚ್ಚರಿಸುವ ಸಂಕಲ್ಪ ಮಂತ್ರವನ್ನು ಕುರಿತು ನಾವು ಕೊಂಚ ಸೂಕ್ಷ್ಮವಾಗಿ ನಿರೀಕ್ಷಿಸಿದರೆ, ಹಿಂದುಸ್ಥಾನದ ಹಳೆಯತನವೂ, ಜಗತ್ತಿನ ಹುಟ್ಟು ತುದಿಮೊದಲಿಲ್ಲದ ಕಾಲವನ್ನು ತಮ್ಮ ದೃಷ್ಟಿಯಿಂದ ಅಳೆದ ಆರ್ಯರ ಜಾಣತನವೂ ಇವೆಲ್ಲ ನಮ್ಮ ಕಣ್ಣಿಗೆ ಕಟ್ಟಿ ಅತ್ಯಾಶ್ಚರ್ಯವೆನಿಸುವದು.

---

# ೩ ನೆಯ ಪ್ರಕರಣ

---

## ಸಾಮಾಜಿಕ ಪದ್ಧತಿ.

**ಜಾತಿ ಪದ್ಧತಿಯು ಹಿಂದೂ ಸಮಾಜದ ಅನೇಕ ತೊಂದರೆಗಳನ್ನು ದೂರಗೊಳಿಸಿದ್ದಲ್ಲದೆ, ಹಿಂದಕ್ಕೆ ಹಿಂದೂ ಸಮಾಜದ ಸ್ಥೈರ್ಯಕ್ಕೂ ವ್ಯವಸ್ಥೆಗೂ ಬಹು ಸಹಾಯ ಮಾಡಿದೆ.**

—ಸರ ಹೆನ್ರಿ ಕಾಟನ್ನರು.

ಸಮಾಜದ ಕಟ್ಟನ್ನು ಮೊದಲು ಆರ್ಯರೇ ಪೂರ್ಣಗೊಳಿಸಿದರು. ಈ ಪದ್ಧತಿಯು ಕೇವಲ ಶಾಸ್ತ್ರೀಯ ತತ್ವಗಳನ್ನವಲಂಬಿಸಿರುವದರಿಂದ, ಜಗಳಗಳಿಗೆ ಇಂಬುಗೊಡದೆ, ಎಲ್ಲರ ಕ್ಷೇಮಕ್ಕೆ ಸಾಧಕವಾಗಿದ್ದಿತು. ಈ ತೆರದ ಸಾಮಾಜಿಕ ವ್ಯವಸ್ಥೆಯಿದ್ದುದರಿಂದ ಈಗಿನಂತೆ ಒಬ್ಬರು ಶ್ರೀಮಂತರು, ಇನ್ನೊಬ್ಬರು ಬಡವರಾಗಿರಲು ಅವಕಾಶವಿರಲಿಲ್ಲ; ಕಾರ್ಖಾ

ಯಿಲ್ಲದು ಅನ್ನುವಂತೆ, ಪ್ರತಿಯೊಂದು ಸಮಾಜಕ್ಕೆ ಒಂದು ಆಧ್ಯಾತ್ಮಿಕ ತತ್ವವಿರುತ್ತದೆ. ಹಿಂದೂ ಸಾಮಾಜಿಕ ಪದ್ಧತಿಯ ಮುಖ್ಯಧ್ಯೇಯವು ರಾಷ್ಟ್ರ - ಸೇವೆಯಾಗಿದ್ದಿತು; ಆದುದರಿಂದ ಸಮಾಜದಲ್ಲಿರುವ ಪ್ರತಿಯೊಂದು ವ್ಯಕ್ತಿಗೆ ತನ್ನಲ್ಲಿಯ ಅಂತಃಶಕ್ತಿಗಳನ್ನು ಸಂಪೂರ್ಣವಾಗಿ ಬೆಳೆಯಿಸಿ, ಆ ಶಾರೀರಿಕ-ಬೌದ್ಧಿಕ-ಶಕ್ತಿಗಳನ್ನು ಪ್ರಪಂಚ ಕ್ಷೇಮಕ್ಕಾಗಿಯೂ, ನೆಮ್ಮದಿಗಾಗಿಯೂ, ಬೆಳವಣಿಗೆಗಾಗಿಯೂ ಬಳಸಲಿಕ್ಕೆ ತತ್ಕಾಲೀನರು ತಕ್ಕ ಸಂಧಿಗಳನ್ನೂ ಅನುಕೂಲತೆಯನ್ನೂ ಕಲ್ಪಿಸಿ ಕೊಡುತ್ತಿದ್ದರು. ತನ್ನಲ್ಲಿ ಅತ್ಯುತ್ಕಟವಾಗಿ ವಾಸಿಸುತ್ತಿರುವ ಗುಣ-ಕೌಶಲ್ಯಗಳನ್ನು ಪ್ರತಿಯೊಬ್ಬನು ರಾಷ್ಟ್ರಸೇವೆಯಲ್ಲಿ ಸಮರ್ಪಿಸುತ್ತಿದ್ದನು. ಇದರಿಂದ ಅವನಲ್ಲಿ ಗೂಢವಾದ ಬುದ್ಧಿಶಕ್ತಿ ಮುಂತಾದವು ಬೆಳೆದು ಒಹು ಮಟ್ಟಿಗೆ ರಾಷ್ಟ್ರ ಪೋಷಣೆಗೆ ಸಾಧಕವಾಗುತ್ತಿತ್ತು.

ಈ ಮೇರೆಗೆ ಪ್ರಾಚೀನ ಆರ್ಯರು ತಮ್ಮ ಸಮಾಜದಲ್ಲಿ ಅತ್ಯಂತ ಜಾಣತನದ ವರ್ಗೀಕರಣ ಮಾಡಿದ್ದರಿಂದ ಎಲ್ಲರಿಗೂ ಒಂದೇ ಸಮವಾಗಿ ಹಣವು ಹಂಚಲ್ಪಟ್ಟು ಯಾರಿಗೂ ತೊಂದರೆಯಾಗದೆ, ಜೀವನ ನಡೆದದಲ್ಲದೆ, ಜನಾಂಗದ ಬೌದ್ಧಿಕ ಹಾಗೂ ನೈತಿಕ ಮುನ್ನಡೆಗೆ ಸಹಾಯವಾಗಿ, ತದ್ವಾರಾ ರಾಷ್ಟ್ರ-ಬಲ ಸಂವರ್ಧನೆಯಾಗುತ್ತಿತ್ತು; ಹೀಗಿದ್ದ ಮೂಲಕವೇ ಜನಾಂಗದೊಳಗೆ ಶಾಂತಿ- ನೆಮ್ಮದಿಗಳು ನೆಲೆಗೊಂಡು ಜನಾಂಗವು ಮುನ್ನಡೆಯಲು ಅನುವಾಗುತ್ತಿತ್ತು; ಒಂದೇ ಮಾತಿನಲ್ಲಿ ಹೇಳಬೇಕೆಂದರೆ, ಆರ್ಯರ ಜೀವನವು ರಾಷ್ಟ್ರೀಯ, ಸಾಮಾಜಿಕ ದೃಷ್ಟಿಗಳಿಂದ ಶಾಂತಿ ಸುಖಗಳಿಂದ ಕೂಡಿತ್ತೆನ್ನಲಿಕ್ಕೆ ಏನೂ ಪ್ರತ್ಯವಾಯವಿಲ್ಲ.

ಆರ್ಯರ ಸಾಮಾಜಿಕ-ಸಂಘಟನೆಯ ತತ್ವವೆಂದರೆ ವರ್ಣಾಶ್ರಮ ವ್ಯವಸ್ಥೆಯು. ಇಡೀ ಮಾನವ ಜಾತಿಯನ್ನೇ ಪ್ರಾಚೀನರು ಆರ್ಯ ಹಾಗೂ ದಸ್ಯುಗಳೆಂದು ಎರಡು ಬಗೆಯಾಗಿ ವಿಂಗಡಿಸಿದರು. ಆರ್ಯರಲ್ಲಿ ಮತ್ತೆ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರರೆಂದು ನಾಲ್ಕು ಭೇದಗಳು. ಆರ್ಯರು ವರ್ಗೀಕರಿಸಿದ ಈ ಸಮಾಜ-ಪದ್ಧತಿಯು ಒಂದಿಲ್ಲೊಂದು ಬಗೆಯಿಂದ ನವ ನಾಗರಿಕತೆಯನ್ನು ಹೊಂದಿದ ದೇಶಗಳಲ್ಲಿ ಕಂಡೇ ಕಾಣಿಸುತ್ತದೆ. ಪ್ರಾಚೀನ ಆರ್ಯರಲ್ಲಿ ಈ ಬಗೆಯ ಸಮಾಜ-ವರ್ಗೀಕರಣವು ಪೂರ್ಣ ವ್ಯವಸ್ಥೆಯನ್ನು

ಹೊಂದಿತ್ತು; ಅದನ್ನವರು ಆನುವಂಶಿಕ ತತ್ವಕ್ಕನುಗುಣವಾಗಿ ಬಳಿಕೆಯಲ್ಲಿ ತಂದಿದ್ದರು. ಆನುವಂಶಿಕ ತತ್ವದಲ್ಲಿ ಹಿರಿಯರಲ್ಲಿರುವ ತೇಜಸ್ಸಿನ ರಕ್ಷಣೆ, ಶ್ರಮದ ಉಳಿತಾಯ, ಬುದ್ಧಿ ವಿಕಾಸಕ್ಕೆ ಹೆಚ್ಚು ಸೌಲಭ್ಯ, ಇವನ್ನು ಕಲ್ಪಿಸಿ ಕೊಡುವ ಗುಣಗಳಿರುವವು. ಹಿಂದಕ್ಕೆ ಹಿಂದೂದೇಶದಲ್ಲಿರುವಂತೆ ಇಂದಿಗೂ ಇಂಗ್ಲಂಡ, ಫ್ರಾನ್ಸ, ಅಮೇರಿಕಾದಂಥ ಸುಧಾರಿಸಿದ ದೇಶಗಳಲ್ಲಿಯೂ ವಿದ್ವಾಂಸರು, ದಂಡಿನವರು, ವೈದ್ಯರು, ವರ್ತಕರು, ವಕೀಲರು, ಧರ್ಮಬೋಧಕರು, ಸೇವಕರು ಇದ್ದೇ ಇರುವರು. ಆಗಿನ–ಈಗಿನ ಪದ್ಧತಿಯಲ್ಲಿ ಮಾತ್ರ ಒಂದೇಒಂದು ಭೇದ; ಆಗಿನದು ಪೂರ್ಣಸ್ಥಿತಿಗೆ ಮುಟ್ಟಿದ್ದಾಗಿತ್ತು; ಈಗಿನದು ಅವ್ಯವಸ್ಥಿತವೂ, ಅಗಡವೂ, ಅಪೂರ್ಣವೂ ಆಗಿದೆ.

ಈಗಿನ ಜಾತಿಭೇದವೆಂದರೆ ಒಂದು ಬಗೆಯಿಂದ ವರ್ಣಾಶ್ರಮದ ಪರಿಹಾಸಪದ್ಧತಿಯಾಗಿದೆ. ಯಾವನೊಬ್ಬನು ಹುಟ್ಟು ಬ್ರಾಹ್ಮಣನೂ, ಹುಟ್ಟು–ಶೂದ್ರನೂ ಇರುತ್ತಿರಲಿಲ್ಲ. ಬ್ರಾಹ್ಮಣರ ಮಕ್ಕಳು ಅವರವರ ಯೋಗ್ಯತೆಯಂತೆ, ಬ್ರಾಹ್ಮಣ, ಕ್ಷತ್ರಿಯ ವೈಶ್ಯ ಶೂದ್ರರಾಗುತ್ತಿದ್ದರು.

**ब्रम्हणा पूर्वसृष्टं ही कर्मभिर्वर्णतां गतम्** ಅಂದರೆ ಬ್ರಹ್ಮನಿಂದ ಸೃಜಿಸಲ್ಪಟ್ಟ ಈ ಮಾನವ ವರ್ಗವು ಕರ್ಮಕ್ಕನುಗುಣವಾಗಿ ವರ್ಣೀಕರಿಸಲಾಯಿತೆಂದು ಭಾರತ ಶಾಂತಿಪರ್ವದಲ್ಲಿ ಹೇಳಲಾಗಿದೆ. ಐತರೆಯ ಬ್ರಾಹ್ಮಣದೊಳಗೆ ಇನ್ನೊಂದು ಉದಾಹರಣೆಯಿದೆ; ಅದರಲ್ಲಿ ಕವಷ–ಐಲೂಷನೆಂಬ ಶೂದ್ರನು ಬಹು ವಿದ್ಯಾವಂತನಾದ್ದರಿಂದ ಋಷಿಪದವಿಗೇರಿಸಲ್ಪಟ್ಟನೆಂದು ಹೇಳಿದೆ; ಈತನೇ ಋಗ್ವೇದದೊಳಗಿನ ಕೆಲವು ಸೂಕ್ತಗಳನ್ನು ರಚಿಸಿರುವನು; ಇದರಂತೆಯೇ ಉಪನಿಷದಾದಿಗಳಲ್ಲಿ ಸತ್ಯಕಾಮ ಜಾಬಾಲಿಯ ಕಥೆಯೂ ಪ್ರಸಿದ್ಧವಿದೆ. ಈತನು ಯಜುರ್ವೇದದ ಒಂದು ಶಾಖೆಯನ್ನು ಸ್ಥಾಪಿಸಿದನೆಂದೂ ತಿಳಿಯುತ್ತದೆ. ಪ್ರಖ್ಯಾತ ವ್ಯಾಕರಣಾಚಾರ್ಯನಾದ ಪಾಣಿನಿಯ ಅಷ್ಟಾಧ್ಯಾಯಿ ಗ್ರಂಥದಲ್ಲಿ ಚಕ್ರವರ್ಮನೆಂಬ ವೈಯ್ಯಾಕರಣಿಯ ಉಲ್ಲೇಖ ಬಂದಿದೆ; ಈತನು ಕ್ಷತ್ರಿಯನಿದ್ದನೆಂಬುದು ಆತನಿಗಿರುವ ವರ್ಮಾ ಎಂಬುವ ಹೆಸರಿನಿಂದಲೇ ಸ್ಫುಟವಾಗುತ್ತದೆ. ವಿಶ್ವಾಮಿತ್ರ, ವಾಲ್ಮೀಕರು ಯಾರಿದ್ದರು ? ಹಿಂದೂದೇಶಕ್ಕೆ ಗ್ರೀಕರ ದಾಳಿಬರುವ ಕಾಲದವರೆಗೆ ಈಗಿನಂತೆ ಜಾತಿಭೇದವು ಇಷ್ಟೊಂದು ಗಟ್ಟಿ

ಯಾಗಿರಲಿಲ್ಲ. ಯಾವುದೇ ಜಾತಿಯ ಹಿಂದುವು ಬ್ರಾಹ್ಮಣನಾಗಬಹು ದೆಂಬ ಹಿಂದೂದೇಶದ ವರ್ಣವ್ಯವಸ್ಥೆಯ ಬಗ್ಗೆ ಮೆಗಾಸ್ಥಿನಿಸನು ಬರೆ ದಿಟ್ಟಿದ್ದಾನೆ.

ಪರಂಪರೆಯ ಪದ್ಧತಿಯನ್ನು ಕಾಯಬೇಕೆನ್ನುವವರು ಪ್ರತಿಯೊಂದು ವರ್ಣವನ್ನು ಎಲ್ಲ ಬಗೆಯಿಂದ ಉಚ್ಚ್ರಾಯಸ್ಥಿತಿಗೆ ಮುಟ್ಟಿಸಬೇಕೆಂದೆ ನ್ನುತ್ತಿದ್ದರು. ಇತ್ತೀಚೆ ಯುರೋಪ ಅಮೇರಿಕೆಯ ವಿದ್ಯಾವಂತರಿಗೆ 'ಪರಂಪರೆಯ ಪ್ರತಿಭೆ' ಯೆಂಬುದೊಂದು ಒಳ್ಳೇ ಶೋಧನೆಯ ವಿಷಯ ವಾಗಿದೆ; ಮೇಲಾಗಿ ಸಮಾಜಶಾಸ್ತ್ರಕ್ಕೆ ಈಗ ಅನೇಕರು ವಿಕಾಸವಾದವನ್ನು ಹಚ್ಚುತ್ತಿರುವದರಿಂದ, ಅದು ಸಂಪೂರ್ಣ ಸ್ಥಿತಿಗೆ ಮುಟ್ಟಿದನಂತರ ಪ್ರಾಚೀನ ವರ್ಣದ ಮಹತ್ವವು ಆಗ ತಾನೇ ಪ್ರತೀತವಾಗುವದು.

ಒಂದಾನೊಂದು ಕಾಲಕ್ಕೆ ಈಗಿನ ಹಿಂದೂ ಸಮಾಜವು ಪುರಾಣ ಮತವಾದಿಯಾಗಿದ್ದರೂ, ಅದರ ಜೊತೆಯಲ್ಲಿ ಅದು ಪ್ರಗತಿಪ್ರಿಯವೂ ಆಗಿದ್ದಿತು; ಹಿಂದೂಜನರಲ್ಲಿರುವ ಈ ಸಾಮಾಜಿಕ ವರ್ಣತತ್ವದ ಬಲ ದಿಂದಲೇ ಈ ಜನಾಂಗಕ್ಕೆ ಸಾವಿರಾರು ವರ್ಷಗಳಿಂದ ಹಲವು ರಾಜಕೀಯ ಧಾರ್ಮಿಕ ಪಿಡುಗುಗಳ ಬಿರುಬಡತಗಳು ಬಿದ್ದರೂ, ಮಿಕ್ಕ ಜನಾಂಗಗಳಂತೆ ಜೀರ್ಣವಾಗದೆ ಹಾಗೇ ಸ್ಥಿರವಾಗಿ ಎದೆಗೊಟ್ಟು ನಿಂತುಕೊಂಡಿದೆ. ಈ ಬಗ್ಗೆ ಕೆಲವು ಪಾಶ್ಚಾತ್ಯರ ಅಭಿಪ್ರಾಯಗಳು:—

ಯುರೋಪಿನ ದೃಷ್ಟಿಯಿಂದ ಈ ತರದ ಸಮಾಜಸ್ಥಿತಿಗೆ ಯಾವ ವಿಧದ ಮಹತ್ವವಿರುವದೆಂಬುದನ್ನು ಕುರಿತು ಮಿ. ಸಿಡ್ನೆಲೋ ಎಂಬುವರು ತಮ್ಮ (*Vision of India*) ಎಂಬ ಪುಸ್ತಕದಲ್ಲಿ ಬರೆಯುವದು. "ಹಿಂದೂಜಾತಿ ಪದ್ಧತಿಯು ಪ್ರತಿಯೊಬ್ಬನಿಗೆ ಒಂದು ಸ್ಥಳವನ್ನೂ, ಒಂದು ಉದ್ಯೋಗವನ್ನೂ, ಸಂಗಡಿಗರನ್ನೂ ಕಲ್ಪಿಸಿಕೊಡುತ್ತದೆ. ಆರಂಭಕ್ಕೆ ಅದು ಮನುಷ್ಯನನ್ನು ಸಮಾಜದ ಘಟಕನನ್ನಾಗಿ ಮಾಡುತ್ತದೆ. ಜಾತಿಯೇ ಹಿಂದುವಿನ ಗೆಳೆಯರ ಗುಂಪು; ಅದೇ ಅವನ ಸಂಘ; ಹಿಂದುಸ್ಥಾನದೊಳಗೆ ಕೆಲಸದ ಮನೆಗಳಿಲ್ಲ; ಮತ್ತು ಅವು ಬೇಕಿಲ್ಲ. ಜಾತಿಯನ್ನುಳಿದ ಹಿಂದುಸ್ಥಾ ನದ ಚಿತ್ರವನ್ನು ಕಲ್ಪಿಸಲಿಕ್ಕಾಗದು."

ಕೌರವ-ಪಾಂಡವರ ಭಾರತೀಯ ಯುದ್ಧಕಾಲದಿಂದ ಹಿಂದೂ

ದೇಶದ ಇತಿಹಾಸವು ಪಲ್ಲಟವಾಯಿತು. ಆಕ್ಷಣಾಕ್ಕೆ ಮುಂದಿನ ಭಾರತೀಯರ ಹಣೇಬರಹವು ಬರೆಯಲಾಯಿತು. ಹಿಂದೂಜನರ ಬೆಳವಣಿಗೆಯು ಹಾಗೂ ಭಾರವಣೆಯ ಕೆಲಸಗಳು ಕಟ್ಟಾದವು. ದ್ವಾಪರ ಯುಗದ ಅಂತ್ಯಕಾಲವೆಂದರೆ, ಭಾರತೀಯರ ಅಭ್ಯುದಯದ ಮಧ್ಯಾಹ್ನವು; ಅದು ಮುಗಿದು ಕಲಿಯುಗವು ಕಾಲಿಟ್ಟೊಡನೆ, ಸೃಷ್ಟಿ ಕ್ರಮದಂತೆ, ನೆತ್ತಿಗೇರಿದ್ದ ಸೂರ್ಯನು ಮೆಲ್ಲಗೆ ಇಳಿಯಲಾರಂಭಿಸಿದನು. ಅವನು ಕ್ರಮಕ್ರಮವಾಗಿ ಸ್ಥಾನೇಶ್ವರ ರಣಾಂಗಣದ ಮೇಲೆ ಸಂಪೂರ್ಣವಾಗಿ ಮುಳುಗಿದನು. ಭಾರತಕಾಲವು ಹಿಂದೂಗಳ ಹೆಚ್ಚಳದ ಶಿಖರವಾದಂತೆಯೇ ಸ್ಥಾನೇಶ್ವರದಲ್ಲಾದ ಶಹಾಬುದ್ದೀನನ ಗೆಲವು ಹಿಂದೂಗಳ ಸತ್ವಕಾಲದ ಸಂಜೆಯಾಯಿತು. ಈ ಮಹಾಯುದ್ಧವು ಅನೇಕ ಜನಾಂಗಗಳ ಭವಿತವ್ಯವನ್ನು ಮಾರ್ಪಡಿಸಲು ಬಹು ಮಟ್ಟಿಗೆ ನಿಮಿತ್ತವಾಯಿತು. ಈ ಕಾಲದ ತರುವಾಯ ಹಿಂದುಸ್ಥಾನದ ಸಾಮಾಜಿಕ ರಾಜಕೀಯ ವ್ಯವಸ್ಥೆಯು ಮೆಲ್ಲಗೆ ಬದಲಾಗತೊಡಗಿತು.

**ಸೆಂಟಹಿಲೇರರು:**— "ಜಗದೊಳಗೆ ಹಿಂದುಸ್ಥಾನದಲ್ಲಿಯಷ್ಟು ಮತ್ತಾವ ದೇಶಗಳಲ್ಲಿಯೂ ಸಾಮಾಜಿಕ ಸ್ವಾತಂತ್ರ್ಯದ ಕಲ್ಪನೆಯು ವಿಕಾಸಗೊಂಡಿಲ್ಲ."

**ಸರ ಜಾನ್ ಉಡ್ರೋಫ:**-- "ಫಿನಿಸಿಯನ್, ಬೆಬಿಲೋನಿಯನ್, ಕಾರ್ಥೇಜಿಯನ್ ಸಂಸ್ಕೃತಿಗಳು ಅಳಿದು ಹೋದರೂ, ಅವುಗಳೊಡನೆ ಬಾಳಿದ ಆರ್ಯ ಸಂಸ್ಕೃತಿಯು ಇನ್ನೂ ಬಾಳಿಕೊಂಡಿದ್ದು, ಅಮರವೆಂದೆನಿಸಿಕೊಳ್ಳುವ ಸ್ಥಿತಿಗೆ ಮುಟ್ಟಿದೆ. ರಾಜಕೀಯ ದೃಷ್ಟಿಯಿಂದ ಹಲವು ಬಗೆಯ ಪರಕೀಯರಿಗೆ ಆಳಾಗಿ ಅನವಸ್ಥೆಗೀಡಾಗಿದ್ದರೂ, ಸಾಮಾಜಿಕ ದೃಷ್ಟಿಯಿಂದ ಜಾತಿಯ ಹಾಗೂ ಸಾಮಾಜಿಕ ವಿಭಾಗಗಳಿಂದ ಹಲಬುತ್ತಿದ್ದರೂ, ಹಿಂದುಸ್ಥಾನವು ಇಂದಿಗೂ ಹಾಗೆಯೇ ಅಚ್ಚಳಿಯದೆ ಒಕ್ಕಟ್ಟಾಗಿ ಉಳಿದಿದೆ. ಹಿಂದುಸ್ಥಾನದಲ್ಲೆಲ್ಲ ಪ್ರಚಲಿತವಿರುವ ಧಾರ್ಮಿಕ, ತತ್ವಜ್ಞಾನ ವಿಷಯಕ ಕಲ್ಪನೆಗಳು ವರ್ಣಾಶ್ರಮಧರ್ಮದ ವಿಲಕ್ಷಣವಾದ ಸಂಘಟನೆಯ ಮುಖ್ಯ ಕಾರಣಗಳೆನ್ನಬಹುದು.

# ೪ ನೇಯ ಪ್ರಕರಣ

## ಸ್ತ್ರೀಯರ ಸ್ಥಾನ.

**यत्र नार्यस्तु पूज्यन्ते रमन्ते तत्र देवताः**

मनुस्मृतिः

**नारी हि जननी पुंसां । नारी श्रीरुच्यते बुधैः ।**
**तस्मात् गेहे गृहस्थानां नारी पूजा गरीयसी ॥**

ಹಿಂದೂ ಸಮಾಜದೊಳಗೆ ಸ್ತ್ರೀಯರಿಗೆ ಮೇಲಾದ ಸ್ಥಾನವಿದ್ದು ಇಷ್ಟು ಪೂಜ್ಯಸ್ಥಾನವನ್ನು ಯಾವ ಸಮಾಜದೊಳಗೂ ಯಾರೂ ಕೊಟ್ಟಿರಲಿಕ್ಕಿಲ್ಲ; ನಾರಿಯು ಮನುಷ್ಯಜಾತಿಯ ತಾಯಿಯಾದುದರಿಂದ ಅವಳು ಪ್ರತ್ಯಕ್ಷ ಲಕ್ಷ್ಮಿಯೇ ಎಂದು ಆರ್ಯರು ಪೂಜಿಸುವದುಂಟು; ಯುರೋಪಿಯರು ಸ್ತ್ರೀಸ್ವಾತಂತ್ರ್ಯದ ಪುರಸ್ಕರ್ತರೆಂದು ಬಡಾಯಿ ಹೇಳುವದುಂಟು; ಅಂಥವರು ಕೂಡ ಆರ್ಯರ ಸ್ತ್ರೀವಿಷಯಕವಾದ ಉದಾತ್ತ ವಿಚಾರಗಳನ್ನೋದಿ ಬೊಟ್ಟುಕಚ್ಚಿಕೊಳ್ಳಬಹುದು; ವ್ಯಕ್ತಿ-ಸ್ವಾತಂತ್ರ್ಯದ ಪುರಸ್ಕರ್ತರೂ ಪಾಶ್ಚಾತ್ಯ ತತ್ವಜ್ಞಾನಿಗಳೂ ಆದ ಮಿ. ಹರ್ಬರ್ಟ ಸ್ಪೆನ್ಸರರು ಕೂಡ ಒಂದೆಡೆಯಲ್ಲಿ "ಯಾವುದೊಂದು ಸಮಾಜದೊಳಗೆ ಸ್ತ್ರೀಯರ ಸ್ಥಾನವು ಎಷ್ಟರ ಮಟ್ಟಿಗೆ ಇರುವದೆಂಬುದರ ಮೇಲಿಂದ ಆಯಾ ಸಮಾಜದ ಸಂಸ್ಕೃತಿಯ ಪರೀಕ್ಷೆಯಾಗುವದು." ಎಂದು ನುಡಿದಿದ್ದಾರೆ.

### ಈ ಬಗ್ಗೆ ಕೆಲವರ ಅಭಿಪ್ರಾಯಗಳು

**ಕರ್ನಲ್‌ಟಾಡ್—:** "ಸಮಾಜದಲ್ಲಿ ಸ್ತ್ರೀಯರಿಗೆ ಯೋಗ್ಯ ಸ್ಥಾನವಿರುವದೇ ಆ ಸಮಾಜದ ಸುಧಾರಣೆಯ ಮುಖ್ಯ ಒರೆಗಲ್ಲು ಎಂದು ತಿಳಿದರೆ, ರಜಪುತರಿಗೆ ಮೇಲಾದ ಸ್ಥಾನವನ್ನು ಕೊಡಲಿಕ್ಕೆಬೇಕು; ಹೆಂಗಸರ ಪಾವಿತ್ರ್ಯದ ವಿಷಯದಲ್ಲಿ ರಜಪುತರು ಬಹು ಸೂಕ್ಷ್ಮದೃಷ್ಟಿಯವರು. ಹೆಂಗಸಿಗೆ ಎಳ್ಳುಕಾಳಷ್ಟು ಅವಮಾನವಾದದ್ದನ್ನೂ ಅವರು ತಾಳಲಾರರು."

**ಪ್ರೊ. ವಿಲ್ಸನ್ನ:—** ಪ್ರಾಚೀನ ಕಾಲದ ಯಾವ ಜನಾಂಗದಲ್ಲಿಯೂ ಹಿಂದುಗಳಷ್ಟು ಹೆಣ್ಣುಜಾತಿಯನ್ನು ಯಾರೂ ಆದರಿಸುತ್ತಿರಲಿಲ್ಲ."

ಪ್ರಾಚೀನ ಕಾಲಕ್ಕೆ ಆರ್ಯರು ತಮ್ಮ ಸ್ತ್ರೀಯರಿಗೆ ತಮಗೆ ಸಮಾನವಾದ ಹಕ್ಕುಗಳನ್ನು ಕೊಟ್ಟಿದ್ದಲ್ಲದೆ, ಗಂಡಸಿಗೂ ಇಲ್ಲದ ಕೆಲವು ವಿಶೇಷ ಮರ್ಯಾದೆಗಳನ್ನು ಅವರಿಗೆ ಸಲ್ಲಿಸಿದ್ದರು. "ಹೆಂಗಸು ಸಾವಿರತಪ್ಪು ಮಾಡಿದರೂ, ಅವಳನ್ನು ಹೂವಿನಿಂದ ಕೂಡ ಹೊಡೆಯಬೇಡ" ಎಂದು ಒಬ್ಬ ಆರ್ಯ ಋಷಿಯು ನುಡಿದಿರುವನು. ಸ್ಮೃತಿಕಾರರಂತೂ ಹೆಂಗಸು ಯಾವಾಗಲೂ ನಿರ್ಮಲಳೆಂದು ಹೇಳುವಾಗ ಸೂರ್ಯನ ಕಿರಣ ಹಾಗೂ ಹರಿವ ನೀರು ಹೇಗೆ ಯಾವಾಗಲೂ ಶುದ್ಧವಾಗಿರುವವೋ ಹಾಗೆಯೇ ಹೆಂಗಸು ಎಂದು ಅವರನ್ನು ನೈಸರ್ಗಿಕ ವಸ್ತುಗಳೊಡನೆ ಹೋಲಿಸಿರುವರು; ಅಲ್ಲದೆ ಹೆಂಗಸರನ್ನು ಅಮರ್ಯಾದೆ ಪಡಿಸುವವನ ಮನೆಯೊಳಗಿನ ಧರ್ಮಕೃತ್ಯಗಳೆಲ್ಲ ಅಪಾರ್ಥವಾಗುವವು" ಎಂದು ಸಾರಿರುವರು. ಯುರೋಪಿಯರಲ್ಲಿ ಸ್ತ್ರೀಗೆ ಬೇರೆ ವ್ಯಕ್ತಿ-ಸ್ವಾತಂತ್ರ್ಯವೆಂಬುದಿದ್ದರೂ, ಅದು ಕೆಲವೆಡೆ ದಾರಿತಪ್ಪಿ, ಅದರಿಂದ ಸಮಾಜದ ಸ್ಥಿತಿಕೆಡಿಸಲು ಕಾರಣವಾಗುವದುಂಟು. ಆದರೆ, ಹಿಂದೂ ಸಮಾಜದೊಳಗೆ ಹಾಗಿರದ್ದರಿಂದ, ಹೆಂಗಸರುಇದ್ದ ಸ್ಥಿತಿಯಲ್ಲಿ ಕೂಡಿನಡೆಯಬೇಕಾಗುತ್ತದೆ. ನಾರಿಯು ಪುರುಷನ ಅರ್ಧಾಂಗಿಯೆಂದು ಹೇಳಿರುವಂತೆ, ಕೊನೆಯವರೆಗೆ ಆಕೆ ಹಾಗೆಯೇ ಇದ್ದುಕೊಂಡು ತನ್ನವ್ಯಕ್ತಿತ್ವವನ್ನು ತನ್ನ ಪತಿಯೊಡನೆ, ಮಕ್ಕಳೊಡನೆ, ತನ್ನ ಅಣ್ಣ ತಮ್ಮಂದಿರೊಡನೆ ಬೆರಿಕೆಮಾಡಿಯೇ ನಡೆಯಬೇಕಾಗುವದು: ಮದುವೆಯಾದ ಹೆಂಗಸಿಗಂತೂ ಪತಿಯೇ ಹೆಚ್ಚಿನ ದೇವರು, ಅವನೇ ಆಕೆಯ ಸರ್ವಸ್ವ; ಪತಿಯೇ ಸತಿಯ ಮಹಾಪ್ರಾಣ; ಆದುದರಿಂದಲೇ ಸತ್ತ ಗಂಡನೊಡನೆ ಜೀವಂತ ಹೆಂಡತಿಯು ಚಿತೆಯ ಮೇಲೆ ಮಲಗುವಂಥ ಜಗತ್ತಿನೊಳಗೆಲ್ಲಿ ಕಾಣದ ಅಸಿಧಾರಾ ಪದ್ಧತಿಯು ಹಿಂದುಸ್ಥಾನದೊಳಗೆ ರೂಢವಾಗಿ ಅನೇಕ ಶತಮಾನಗಳವರೆಗೆ ನಡೆಯಿತು. ಆ ಅವಧಿಯಲ್ಲಿ ಗಂಡಸು ಸತ್ತನೆಂದರೆ, ಅವನೊಡನೆ ಅಲ್ಲಿಂದಲ್ಲಿಯೇ ಪ್ರಾಣ ಬಿಟ್ಟ ಸತಿಯರ, ಗಂಡಸು ಸತ್ತನೆಂದರೆ ಹೆಂಡತಿಯ ಪ್ರಾಣ ಹೋಗದಿದ್ದರೂ, ಆಕೆಯು ಸತ್ತಂತಾಗಿರುವ ಉದಾಹರಣೆಗಳೇನೂ ಕಡಿಮೆಯಿಲ್ಲ; ಮತ್ತು ಅವುಗಳನ್ನೆಲ್ಲ ನೋಡಿ ಅನೇಕ ಪಾಶ್ಚಾತ್ಯರು ಕೂಡ ಬೆರಗಾಗಿರುವರು. ಹಿಂದೂ ಧರ್ಮದೊಳಗೆ ಹೆಂಗಸನ್ನು ಬಿಟ್ಟು ಯಾವ ಧರ್ಮಕಾರ್ಯವನ್ನೂ ಗಂಡಸೊಬ್ಬನೇ ಮಾಡಲಾರನು; ಹಿಂದೂ ಧರ್ಮದೊಳಗೆ

ಸ್ತ್ರೀಯರಿಗಿರುವ ಸ್ಥಾನವನ್ನೂ, ಯುರೋಪದೊಳಗೆ ಸ್ತ್ರೀಯರಿಗಿರುವ ಸ್ಥಾನವನ್ನೂ ನೋಡಿದರೆ, ಹಿಂದೂ ಸಮಾಜವು ಸ್ತ್ರೀಯರಿಗೆ ಎಷ್ಟು ಮರ್ಯಾದೆ ಕೊಟ್ಟಿರುವದು, ಹೆಂಗಸರ ಕೋಮಲತೆಯನ್ನು ಲಕ್ಷಿಸಿ, ಅವರಿಗೆ ಎಷ್ಟು ಮರ್ಯಾದೆಯಿಂದಲೂ ಹೂವಿನಂತೆಯೂ ರಕ್ಷಿಸುತ್ತ ಬಂದಿದೆಯೆಂಬುದೂ ಸ್ಫುಟವಾಗುವದು.

ಈ ಮೇರೆಗೆ ಆರ್ಯರು ಹೆಂಗಸರನ್ನು ಹೂವಿನಂತೆ ರಕ್ಷಿಸುತ್ತಿದ್ದರೂ, ಆರ್ಯಮಹಿಳೆಯರು ಹುಲಿಯಂತೆ ಹುರಿಗೊಂಡು ನಡಿಸಿದ ಅನೇಕ ಪ್ರಸಂಗಗಳಿವೆ. ಭಾರತಕಾಲದೊಳಗೆ ದ್ರೌಪದಿ, ಕೈಕೇಯಿ, ಲೋಪಾಮುದ್ರಾ, ಮೈತ್ರೇಯಿ, ಮುಂತಾದ ಮಹಿಳೆಯರು, ಮಧ್ಯಯುಗದಲ್ಲಿ ರಜಪೂತ ವೀರ ಕನ್ಯೆಯರು ಹುಟ್ಟಿ ಸಮಾಜದ ಇತಿಹಾಸದಲ್ಲಿ ಜರಗಿಸಿದ ಅನೇಕ ವಿದ್ಯೆ, ವೀರ್ಯ ಹಾಗೂ ಆಳಿಕೆಯ ಕಾರ್ಯಗಳು, ಈಗಲೂ ಮಿನುಗುತ್ತಿವೆ. ಚಿತ್ತೂರು ರಾಣಾನು ಮಡಿದ ನಂತರ ರಾಣೇಶ್ವರ ರಣಕ್ಷೇತ್ರದಲ್ಲಿ ಆತನ ಪತ್ನಿಯಾದ ಕೋರಮದೇವಿಯು ಆ ತನ್ನ ರಜಪೂತ ವೀರಾಳುಗಳನ್ನು ಬೆನ್ನಿಗೆ ಕಟ್ಟಿಕೊಂಡು ಕುತುಬುದ್ದೀನನಿಗೆ ಎದುರಾಗಿ ಯುದ್ಧಮಾಡಿ ಅವನನ್ನು ಸೋಲಿಸಿ ಗಾಯಗಾಣಿಸಿದಳು; ಮುಂದೆ ಗುಜರಾತದ ಸುಲ್ತಾನನು ಚಿತ್ತೂರಿನ ಕೋಟೆಯನ್ನು ಎರಡನೇ ಸಾರೆ ಮುತ್ತಿದಾಗಲೂ ತತ್ಕಾಲಿನ ರಾಣಿಯಾದ ಜವಾಹಿರಬಾಯಿಯು ತಾನೇ ಸ್ವತಃ ಚಿಲಖತ್ತನ್ನು ಹಾಕಿಕೊಂಡು ಯುದ್ಧಮಾಡಿ ಮಡಿದಳು.

**ಒಬ್ಬ ಫ್ರೆಂಚ ಪ್ರವಾಸಿಕನಾದ ಬರ್ನಿಯರನು ರಜಪುತರ ಸಂಗತಿಯನ್ನೊಂದನ್ನು ಕಣ್ಣಾರೆ ಕಂಡು ಬರೆದಿಟ್ಟಿದ್ದು:—** ಶಹಾಜಹಾನನ ಮಕ್ಕಳಲ್ಲಿ ಸಿಂಹಾಸನದ ದೆಸೆಯಿಂದ ಅಂತಃಕಲಹ ನಡೆದಿರಲು, ರಜಪುತರು ಶಹಾಜಹಾನನ ಪರವಾಗಿ ಔರಂಗಜೇಬನಿಗೆ ಎದುರಿಸಬೇಕೆಂದು ನಿಶ್ಚಯಗೊಂಡು ಕೆಲದಿನ ಕಾದಿದರು; ತರುವಾಯ ಅದರೊಳಗೆ ಸೋತು ರಾಠೋರದ ರಾಣಾನು ಮನೆಗೆ ಬಂದಾಗ, ಈ ಸುದ್ದಿಯನ್ನು ಕೇಳಿ, ಅವನ ಹೆಂಡತಿಯು ತನ್ನ ಗಂಡನ ಮುಖನೋಡಲೊಪ್ಪದೆ, ಕೋಟೆಯ ಬಾಗಿಲುಗಳನ್ನು ಮುಚ್ಚಿಸಿದಳು, ಮತ್ತು ತನ್ನ ಗಂಡನು ಸತ್ತನೆಂದು ಚಿತೆಯನ್ನೇರಲು ಸಿದ್ಧಳಾದಾಗ ಗಂಡನು ಪುನಃ ಬಂದು

ಔರಂಗಜೇಬನೊಡನೆ ಯುದ್ಧಮಾಡಲು ಹೊರಟನು.

ಪೃಥ್ವೀರಾಜನ ಹೆಂಡತಿಯಾದ ಸಂಯುಕ್ತೆಯು ಒಳ್ಳೇ ಹರೆಯದ ಭರದಲ್ಲಿದ್ದಾಗ ಕೂಡ ತನ್ನ ಗಂಡನಿಗೆ ಯುದ್ಧದಲ್ಲಿ ಸಹಾಯ ಮಾಡಿದ್ದಲ್ಲದೆ, ತಿರುಗಿ ಗಂಡನಿಗೇ "ಮರಣವೆಂಬುದು ಯಾರಿಗೂ ತಪ್ಪದು, ಆದರೂ ಮರ್ಯಾದೆಯಿಂದ ಸಾಯುವವರೇ, ಚಿರಂಜೀವಿಗಳು; ಆದುದರಿಂದ ನಾವು ಬರಿಯ ಸಮ್ಮಿಷ್ಟಕ್ಕೆ ಯೋಚನೆ ಮಾಡದೆ ಅಮರಪದವನ್ನೈದಲು ಯತ್ನಿಸ ತಕ್ಕದ್ದು;" ಎಂದು ಹೇಳಿದ್ದನ್ನು ಓದಿದರೆ ಆರ್ಯಮಹಿಳೆಯರ ಎದೆಯು ಎಷ್ಟು ಬ್ರಹ್ಮಮಯವಾಗಿತ್ತೆಂಬುದು ಒಡೆದು ಕಾಣುವದು.

**ಓಟೋ ರಾಥಫೀಲ್ಡ:—** "ತನ್ನ ಮನೆಯಲ್ಲಿ ಹಿಂದೂಮಹಿಳೆಯು ತಾನೇ ಮನೆಯ ಒಡತಿಯಿದ್ದರೂ ಸರಿ; ಮನೆಯಲ್ಲಿ ಯಾರಾದರೂ ಹಿರಿಯರು ಇದ್ದರೂ ಸರಿ; ಅವಳು ಆದರಶೀಲಳಿರುವಳು; ಆಕೆಯ ಬಾಯಿಂದುದುರುವ ಮುತ್ತಿನಂಥ ಮನ ಕರಗುವ ಮಾತುಗಳನ್ನು ಕೇಳಿದರೇನೇ ಪರಕೀಯನ ಮನಸು ತಣಿಯುವದು."

ಯುರೋಪದಲ್ಲಿ ಸ್ತ್ರೀಸ್ವಾತಂತ್ರ್ಯದ ವಿಚಾರವು ಈಗ ಬೆಳೆದಿದೆ; ಆದರೆ ಯುರೋಪವು ನಾಗರಿಕತೆಯ ತಿರುಳನ್ನರಿಯುವ ಎಷ್ಟೋ ಶತಕಗಳ ಮುಂಚೆಯೇ ಹಿಂದೂಗಳು ಹೆಂಗಸರಿಗೆ ಅರ್ಧಾಂಗಿತ್ವವನ್ನು ಕೊಟ್ಟು ತಮ್ಮ ಸುಖದುಃಖದ ಸಮಭಾಗಿಗಳನ್ನಾಗಿ ಮಾಡಿಕೊಂಡರು; ಗಂಡನು ಅಕಾಲಿಕವಾಗಿಯೂ, ಪುತ್ರ ಸಂತಾನವಿಲ್ಲದೆಯೂ, ಸತ್ತರೆ, ಗಂಡನು ನಪುಂಸಕನೂ, ರೋಗಿಯೂ, ದುರುಳನೂ ಪತಿತನೂ, ಕುರುಡನೂ ಇದ್ದರೆ ಹೆಂಡತಿಯು ಸಂತತಿಗೋಸ್ಕರ ಮಾತ್ರ—ತನ್ನ ಅಪೇಕ್ಷೆಗಾಗಿ ಅಲ್ಲ—ಎರಡನೇ ಪತಿಯನ್ನು ವರಿಸಬಹುದೆಂದು ಮನುಸ್ಮೃತಿಯಲ್ಲಿ ಹೇಳಿಯದೆ; ಹೆಂಗಸರಿಗೆ ಪತಿಯೂ, ಗಂಡಸರಿಗೆ ಪತ್ನಿಯೂ ಅವಶ್ಯವಿರುವಂತೆ, ಕೆಲವು ಗಂಡಸರು ಆಮರಣ ಬ್ರಹ್ಮಚಾರಿಗಳಾಗಿಯೇ ಇರುವಂತೆ, ಸುಲಭಾ ಮುಂತಾದವರಂಥ ಹೆಂಗಸರು ಕೇವಲ ಆಧ್ಯಾತ್ಮಿಕ ಜೀವನದಿಂದಲೇ ಬ್ರಹ್ಮಚಾರಿಣಿಗಳಾಗಿ ಬಾಳಿದ್ದರು; ದ್ರೌಪದಿಯಂಥ ರಾಜಪತ್ನಿಯರು ತಮ್ಮ ಸಾಮ್ರಾಜ್ಯದಲ್ಲಿಯ ಹೆಂಗಸರಿಗೆ ಅವರವರ ಕರ್ತವ್ಯಜ್ಞಾನ ತಿಳಿಸುವದಲ್ಲದೆ ಅರಮನೆಯ ಭಂಡಾರದ ವ್ಯವಸ್ಥೆ, ರಾಷ್ಟ್ರದಲ್ಲಿಯ ಧಾರ್ಮಿಕ ಸಂಸ್ಥೆಗಳ

ವ್ಯವಸ್ಥೆ ಇವುಗಳನ್ನೆಲ್ಲ ತನ್ನ ಕಣ್ಣರಿಕೆಯಲ್ಲಿಯೇ ನಾಗಿಸುತ್ತಿದ್ದಳು. ಯಾಜ್ಞವಲ್ಕ್ಯ ಋಷಿಗಳು ವಾನಪ್ರಸ್ಥಕ್ಕೆ ಹೋಗುವಾಗ ತಮ್ಮ ಹೆಂಡತಿಯಾದ ಮೈತ್ರೇಯಿಯ ಮುಂದೆ ಹಣದ ರಾಶಿಯನ್ನು ಸುರಿವಿದರೂ, 'ಇದನ್ನು ತೆಗೆದುಕೊಂಡು ನಾನೇನು ಮಾಡಲಿ ? ನನಗೆ ಅಮೃತತ್ವದ ಜ್ಞಾನ ಕೊಡಿರಿ' ಎಂದು ಪತಿಯನ್ನು ಕೇಳಿ ಅದರಂತೆ ಜ್ಞಾನಿಯಾದಳು. ಸಾವಿತ್ರಿ ದಮಯಂತಿ, ಸೀತಾ ಮುಂತಾದವರ ಜೀವನಕ್ರಮವಂತೂ ಎಷ್ಟು ಆದರ್ಶಪ್ರಾಯವಾಗಿತ್ತೆಂಬುದು ಪ್ರಸಿದ್ಧವಿದೆ; ತಮ್ಮ ತಪೋಬಲದಿಂದ ಅವರು ಜಗಕ್ಕೆ ವಂದ್ಯರಾಗುವದಲ್ಲದೆ ತಮ್ಮ ವಂಶವನ್ನೂ, ತಮ್ಮ ಸಮಾಜವನ್ನೂ, ತಮ್ಮ ರಾಷ್ಟ್ರವನ್ನೂ ಘನತೆಗೇರಿಸಿ ಇದೇ ದೇಹದಿಂದ ದೇವತೆಗಳಾದರು; ಪತಿಯೇ ಮೇಲಾದ ಗತಿ, ಸತೀತ್ವವೇ ಮೋಕ್ಷ. ಅದನ್ನು ಕಾಯ್ದುಕೊಳ್ಳುವದೇ ತಮ್ಮ ಜೀವಿತದ ಮುಖ್ಯ ಗುಟ್ಟು ಎಂಬುದು ಆರ್ಯ ಮಹಿಳೆಯರಿಗೆ ದೃಢವಾಗಿತ್ತು.

ಈ ಬಗ್ಗೆ ಇನ್ನೊಂದು ಸಂಗತಿಯನ್ನು ಹೇಳಿ ಈ ಪ್ರಕರಣವನ್ನು ಮುಗಿಸುವೆವು.

೧೮೨೯ ನೇ ಇಸ್ವಿಯಲ್ಲಿ ಜನರಲ್ ಸ್ಲೀಮನ್ನರೆಂಬುವರು ತಾವು ಕಣ್ಣುಟ್ಟ ನೋಡಿದ ಸಹಗಮನದ ಸಂಗತಿಯನ್ನೊಂದು ಬರೆದಿಟ್ಟಿದ್ದಾರೆ; ಮೇಲಿನ ಇಸ್ವಿಯಲ್ಲಿ ಜನರಲ್ ಸ್ಲೀಮನ್ನರು ಜಬಲಪೂರದ ಕಲೆಕ್ಟರರಿದ್ದರು; ಆ ಕಾಲಕ್ಕೆ ಜಬಲಪುರದೊಳಗಿನ ಒಂದು ದೊಡ್ಡ ಸನ್ಮಾನ್ಯ ಮನೆತನದೊಳಗಿನ ಗೃಹಸ್ಥನು ಮಡಿಯಲು, ಅವನ ಹೆಂಡತಿಗೆ ಸಹಗಮನಕ್ಕೆ ಅಪ್ಪಣೆ ಕೊಡಬೇಕೆಂದು ಕಲೆಕ್ಟರರಿಗೆ ಅರ್ಜಿಯ ಮೂಲಕ ಕೇಳಿಕೊಂಡರು; ಅರ್ಜಿಯನ್ನು ನೋಡಿ ಒಮ್ಮೆಲೆ ಕಲೆಕ್ಟರರು ಸಹಗಮನಕ್ಕೆ ಅಪ್ಪಣೆ ಕೊಡಲಿಲ್ಲ; ಇಷ್ಟೇ ಅಲ್ಲದೆ, ಸಹಗಮನಕ್ಕೆ ಅಪ್ಪಣೆ ಕೊಡುವವರನ್ನು ದಂಡಿಸಲಿಕ್ಕಾದೀತೆಂದೂ ಹೇಳಿ ಒಬ್ಬ ಪೋಲೀಸನನ್ನು ಕಾವಲವಿಟ್ಟರು; ಸಹಗಮನ ಮಾಡುವ ವಿಧವೆಯ ವಯಸ್ಸು ಸುಮಾರು ೬೫ ಇರಬಹುದು; ಏನು ಮಾಡಿದರೂ ಪತಿಯನ್ನು ದಹನ ಮಾಡಿದ ಸ್ಥಳ ಬಿಟ್ಟು ಆಕೆ ಕದಲಲಿಲ್ಲ; ಮತ್ತು ಅನ್ನ ನೀರಿಲ್ಲದೆ ಚಳಿ ಬಿಸಿಲೆನ್ನದೆ ರಾತ್ರಿ ಹಗಲೂ ನರ್ಮದಾ ದಂಡೆಯ ಮೇಲೆಯೇ ಕುಳಿತು ಬಿಟ್ಟಳು; ಇನ್ನು ಅವಳಿಗೆ ಸಾಯಲು ಅಪ್ಪಣೆ ಕೊಡ

ದಿದ್ದರೆ, ಅವಳು ಹೀಗೇ ಉಪವಾಸ ಬಿದ್ದು ಸಾಯುವಳೆಂದು ಎಲ್ಲರಿಗೂ ಮನದಟ್ಟಾಯಿತು. ಆಗ ಮಿ. ಸ್ಲೀಮನ್ನರು ಕುದುರೆ ಹತ್ತಿಕೊಂಡು ಆಕೆ ಇದ್ದಲ್ಲಿಗೆ ಹೋಗಿ, ಸಹಗಮನಕ್ಕೆ ಸಿದ್ಧಳಾದ ಆ ಪತಿವ್ರತೆಗೆ ಬೇಕಾದಷ್ಟು ರೀತಿಯಿಂದ ಬೆದರಿಕೆ ಹಾಕಿದರು; ಮನ ಒಲಿಸಿದರು; ಅವಳೇನೂ ಅವರ ಮಾತನ್ನು ಲಕ್ಷಿಸದೆ ನಗು ಮುಖದಿಂದ “ ನನ್ನ ನಾಡಿಗಳು ಎಂದೋ ಸತ್ತು ಹೋಗಿರುವವು; ನಾನೀಗ ಹೆಸರಿಗೆ ಮಾತ್ರ ಜೀವಂತಳಿದ್ದಂತೆ ಕಾಣುತ್ತದೆ; ಈ ನನ್ನ ದೇಹದ ಮಣ್ಣನ್ನಷ್ಟು ನನ್ನ ಪತಿಯ ಬೂದಿಯೊಡನೆ ಕೂಡಿಸಿದರೆ ನನ್ನ ಕೆಲಸವಾಯಿತು; ಅದೊಂದು ಮಾತ್ರ ಉಳಿದಿದೆ. ನೀವು ಪರೀಕ್ಷಿಸ ಬೇಕೆಂದಿದ್ದರೆ ಬೆಂಕಿ ತರಿಸಿರಿ ” ಎಂದಳು; ಅಲ್ಲಿದ್ದವರು ಅವಳ ನಾಡಿ ಹಿಡಿದು ನೋಡಿದರು; ಆಗ ನಾಡಿಗಳು ನಿಂತು ಹೋಗಿರುವವಾಗಿ ತೋರಿದವು; ಕೊನೆಗೆ ಕಲೆಕ್ಟರರು “ ನಿಮ್ಮ ಮನೆತನದಲ್ಲಿ ಇನ್ನು ಮುಂದೆ ಯಾರನ್ನೂ ಸಹಗಮನ ಹೋಗಗೊಡುವದಿಲ್ಲ ” ಎಂದು ನೀವು ವಚನ ಕೊಟ್ಟರೆ, ಇವಳಿಗೆ ಈಗ ಸತಿ ಹೋಗಲು ಅಪ್ಪಣೆ ಕೊಡುವೆನೆಂದು ಹೇಳಿದರು; ಅದರಂತೆ ಕರಾರುಗಳಾದ ನಂತರ ಸತಿಯ ಸಿದ್ಧತೆ ನಡೆಯಿತು; ದೊಡ್ಡದೊಂದು ತೆಗ್ಗು ತೋಡಿ, ಅದರಲ್ಲಿ ಚಿತೆಯನ್ನು ರಚಿಸಿದರು; ಮೈತೊಳೆದುಕೊಂಡು ಸ್ವಲ್ಪ ಎಲೆಯಡಿಕೆ ಹಾಕಿಕೊಂಡು, ಚಿತೆಯವರೆಗೆ ೧೦೦ ಹೆಜ್ಜೆ ನಡೆದು ಬಹು ಆನಂದದ ಮುದ್ರೆಯಿಂದ “ ನಿಮ್ಮನ್ನು ಅಗಲಿ ೫ ದಿನ ಕಳೆದೆ. ಇದೀಗ ನಿಮ್ಮಡಿಗೆ ಬರುವೆನಿನ್ನು ” ಎಂದು ಪತಿಗೆ ನುಡಿದು ಚಿತೆಗೆ ಪ್ರದಕ್ಷಿಣೆ ಹಾಕಿ ಹೂವನ್ನೇರಿಸಿ, ಅದರೊಳಗೆ ಕಾಲಿಟ್ಟು, ಸುಖವಾಗಿ ಹಾಸಿಗೆಯ ಮೇಲೆ ಉರುಳುವಂತೆ ಅಗ್ನಿಯಲ್ಲಿ ದೇಹವನ್ನು ಉರುಳಿಸಿದಳು. ಆಗ ಅವಳು ಅಗ್ನಿಯ ಸುಡುವಿಕೆಯಿಂದ ಚೀರಲಿಲ್ಲ; ಹೊರಳಾಡಲಿಲ್ಲ. ಮರುಗಲಿಲ್ಲ; ಅವಳ ಬಾಯಿಂದ ಒಂದೂ ದುಃಖದ ಶಬ್ದವನ್ನೂ ಕೇಳಲಿಲ್ಲ.

---

## ೫ ನೆಯ ಪ್ರಕರಣ.

---

## ಶೀಲ-ಸ್ವಭಾವಗಳು.

“ಮುಸಲ್ಮಾನರ ಆಳಿಕೆಯಲ್ಲಿಯೂ, ಅವರ ದಾಳಿಯ ದವಡೆಯಲ್ಲಿಯೂ ಅನೇಕ ಶತಮಾನಗಳನ್ನು ಕಳೆದರೂ, ಹಿಂದೂಜನರು ಈಹೊತ್ತು ಜಗತ್ತಿನೊಳಗಿರುವ ಯಾವುದೊಂದು ಸ್ವತಂತ್ರ, ಸದ್ಗುಣಸಂಪನ್ನ, ಸತ್ಯಸಂಧ ಜನಾಂಗದವರಷ್ಟೇ ಯೋಗ್ಯತೆಯುಳ್ಳವರಿದ್ದಾರೆ; ಅಂದಮೇಲೆ ಪ್ರಾಚೀನ ಹಿಂದೂಜನರ ಗುಣವರ್ಣನೆಯನ್ನೆಷ್ಟೆಂದು ಯಾವ ಬಾಯಿಂದ ಮಾಡುವದು? ಹಿಂದೂಜನರ ದಿನದ ಆಚರಣೆಗೆ ಉತ್ಕೃಷ್ಟವಾದ ನೀತಿಯ ಕಲ್ಪನೆಗಳೇ ಮಾರ್ಗದರ್ಶಕವಾಗಿರುವವು.”

—**ಮ್ಯಾಕ್ಸಮುಲ್ಲರ ಸಾಹೇಬರು.**

ಯಾವದೊಂದು ಜನಾಂಗದೊಳಗಿನ ಜನರ ಶೀಲಸ್ವಭಾವಗಳೇ ಆಯಾ ಜನಾಂಗದವರ ನಿಜವಾದ ಯೋಗ್ಯತೆಯನ್ನು ತಿಳಿಯುವ ಕನ್ನಡಿಗಳಾಗಿರುತ್ತವೆ. ಈ ದೃಷ್ಟಿಯಿಂದ ನೋಡಿದರೆ, ಪ್ರಾಚೀನ ಆರ್ಯರನ್ನು ಸರಿಗಟ್ಟುವವರು ಪ್ರಾಚೀನಾರ್ವಾಚೀನ ಕಾಲದಲ್ಲಿ ನಮಗಾರೂ ಕಾಣುವದಿಲ್ಲ. ಪ್ರಾಚೀನ ಆರ್ಯರ ಸಾಧುವೃತ್ತಿ, ಸಾಧುಜೀವನ, ಪ್ರಾಮಾಣಿಕತನ, ಸತ್ಯಸಂಧತೆ, ಧೈರ್ಯ, ಆತ್ಮಾರ್ಪಣತನ, ಶೌರ್ಯ ಮುಂತಾದವುಗಳನ್ನು ಪ್ರತಿಯೊಬ್ಬರೂ ಮಾತು ಮಾತಿಗೆ ಮಾದರಿಯೆಂದು ಹೇಳುವ ವಾಡಿಕೆಯಾಗಿತ್ತು. ಇಂತಹ ಒಂದಕ್ಕಿಂತ ಒಂದು ಅಮೂಲ್ಯ ಗುಣಗಳ ಕೆಚ್ಚಿನಿಂದ ಆರ್ಯರ-ಶೀಲ ಸ್ವಭಾವಗಳು ನಿಚ್ಚಟವಾದುದರಿಂದ ಸೃಷ್ಟಿದೇವತೆಯೇ ಪ್ರತ್ಯಕ್ಷವಾಗಿ ಮೈವೆತ್ತು “ಇದೋ, ಇವರೀಗ ನಿಜವಾದ ಪುತ್ರರು” ಎಂದು ಜಗಕ್ಕೆ ಸಾರಿ ಹೇಳುವ ಪ್ರಸಂಗಗಳು ಇತಿಹಾಸದೊಳಗೆ ಸಾಕಷ್ಟಿವೆ.

ಆರ್ಯರ ಶೀಲ ಸ್ವಭಾವಗಳಲ್ಲೊಂದಾದ ಸತ್ಯ-ಸಂಧತೆಯನ್ನು ಅನೇಕ ಜನಾಂಗದವರು ಬಾಯಿತುಂಬ ಹೊಗಳಿರುವರು. ಅವರ ಅಭಿಪ್ರಾಯಗಳು:—

**ಸ್ಟ್ರ್ಯಾಬೋಸಾಹೇಬರನ್ನುವದು:—** "ಆರ್ಯರು ಸತ್ಯವಂತರೂ ಪ್ರಾಮಾಣಿಕರೂ ಇರುವದರಿಂದ ಅವರ ಬಾಗಿಲುಗಳಿಗೆ ಬೀಗಗಳು ಬೇಕಾಗುವದಿಲ್ಲ; ಅಥವಾ ಅವರಾಡಿದ ಮಾತುಗಳಿಗೆ ಕಾಗದಗಳು ಬೇಕಿಲ್ಲ."

**ಏರಿಯನ್ನನು:—** "ಆರ್ಯರು ಸುಳ್ಳು ಹೇಳುವರೆಂಬ ಸೊಲ್ಲನ್ನು ಯಾರೂ ಕೇಳಿಲ್ಲ." ಈ ಮಾತಿನಲ್ಲಿ ಸ್ವಲ್ಪ ಅತ್ಯುಕ್ತಿಯಿದ್ದರೂ, ಇದೇನೂ ಸಾಮಾನ್ಯ ಪ್ರಶಂಸೆಯಾಗಲಿಲ್ಲ.

ಹನ್ನೊಂದನೆಯ ಶತಮಾನದಲ್ಲಿ ಬರೆದ ಒಂದು ಭೂಗೋಲದಲ್ಲಿ **ಇಡ್ರಿಸಿ ಎಂಬುವನು** ಅನ್ನುವದು:— "ಹಿಂದೂಜನರು ಬಹು ನ್ಯಾಯಪ್ರಿಯರು. ಅವರು ಸತ್ಯ, ಪ್ರಾಮಾಣಿಕತನ, ನಂಬಿಗೆ ಇವುಗಳ ವಿಷಯದಲ್ಲಿ ಬಹು ಹೆಸರುವಾಸಿಗಳಾಗಿದ್ದರಿಂದ ಸುತ್ತುಮುತ್ತಲಿನ ಜನಾಂಗದವರು ಅವರ ದೇಶಕ್ಕೆ ಗುಂಪು ಕಟ್ಟಿಕೊಂಡು ಹೋಗುವರು."

**ಶ್ಯಾಮುಸುದ್ದೀನ ಅಬೂಅಬ್ದುಲ್ಲಾ:—** ಇವರು ೧೩ ನೇ ಶತಮಾನದಲ್ಲಿ ಬರೆದಿಟ್ಟ ಲೇಖದಲ್ಲಿ "ಹಿಂದೂಜನರು ಅಸಮೋಸಗಳಿಂದ ದೂರಾಗಿರುವರು. ಅವರಿಗೆ ಮರಣ ಭಯವಿಲ್ಲ." ಎಂದಿರುವರು.

**ಮಾರ್ಕೊಪೋಲೋ:—** "ಜಗತ್ತಿನಲ್ಲಿ ಬ್ರಾಹ್ಮಣರೇ ಅತ್ಯುತ್ತಮವಾದ ವರ್ತಕರು. ಅವರ ಬಾಯಿಂದ ಸುಳ್ಳು ಬರುವದೆಂದರೆ ಎಂಥ ಮಾತೋ?"

**ಅಬುಲ್‌ಫಜಲ್:—** ಇನ್ನೂರು ವರ್ಷಗಳಾಚೆ ಯಾರೂ ಯಾರಿಂದಲೂ ದುಡ್ಡು ಮುಟ್ಟಿದ ಬಗ್ಗೆ ಪಾವತಿ ತೆಗೆದುಕೊಳ್ಳುತ್ತಿರಲಿಲ್ಲ; ಅಥವಾ ದುಡ್ಡು ಇಟ್ಟುಕೊಂಡ ಬಗ್ಗೆ ಕಾಗದ ಬರೆದುಕೊಡುತ್ತಿರಲಿಲ್ಲ. ದೊಡ್ಡ ದೊಡ್ಡ ಸಾವುಕಾರರಲ್ಲಿ ನಡೆಯುವ ಬಡ್ಡಿಯ, ಸಾಲಕೊಡುವ ವ್ಯವಹಾರವೆಲ್ಲವೂ ನಾಲಿಗೆಯ ಭರವಸೆಯಿಂದಲೇ ನಡೆಯುತ್ತಿತ್ತು.

**ಕರ್ನಲ್‌ಸ್ಲೀಮನ್ನರು:—** ಬೇಕಾದಷ್ಟು ಆಸ್ತಿ ಸಿಗುವ, ಪ್ರಾಣ ಹೋಗುವ ಪ್ರಸಂಗಗಳು ಬಂದರೂ ಹಿಂದೂಜನರು ಸುಳ್ಳಾಡಿ ತಮ್ಮ ನಾಲಿಗೆ ಕೆಡಿಸಿಕೊಳ್ಳರೆಂದು ನನ್ನ ಅನುಭವ.

ಹಿಂದೂಜನರ ಶೀಲಸ್ವಭಾವಗಳನ್ನು ಈ ರೀತಿಯಾಗಿ ಯಾವಾಗಲೂ ಕಾಪಾಡಿ, ಅವರನ್ನು ಮಾದರಿಯ ಸತ್ಯವಂತರನ್ನಾಗಿಸಲು ಅನಾದಿಕಾಲ

ದಿಂದಲೂ ಹೆಣಗುವಂಥ ಪುರಾಣ ಗ್ರಂಥಗಳೇನಾದರೂ ಇದ್ದರೆ, ರಾಮಾಯಣ ಮಹಾಭಾರತಗಳೇ ! ಕೈಯಲ್ಲಿದ್ದು ಬಿದ್ದ ಆಸ್ತಿಯು ಹಾಳಾಗಲಿ ! ನೆಂಟರಿಷ್ಟರು ಕೈಬಿಡಲಿ !! ಕೊನೆಗೆ ಜೀವವು ಹಾರಿಹೋದರೂ ಸರಿ ! ಅಸತ್ಯದಿಂದ ನಾಲಿಗೆಯನ್ನು ಮೈಲಿಗೆ ಮಾಡಲಾಗದೆಂದು ಆರ್ಯರ ಪ್ರತಿಜ್ಞೆ. ಮಹಾಮಹಿಮನಾದ ಯುಧಿಷ್ಠಿರನಿಗೆ ಸ್ವರ್ಗದ್ವಾರವು ತೆರದಿರಲು ತನ್ನವರಾದ ಅಣ್ಣ ತಮ್ಮಂದಿರು ದ್ರೌಪದಿಯು ಅಷ್ಟೇ ಅಲ್ಲದೆ ತನ್ನನ್ನು ಹಿಂಬಾಲಿಸಿದ ನಾಯಿಗೆ ಸಹ ಸ್ವರ್ಗದೊಳಗೆ ಬರಗೊಡದಿದ್ದರೆ ತಾನು ಅಲ್ಲಿ ಅಡಿಯಿಡಲಾರೆನೆಂದು ಹೇಳಿದ ಅಮರ ವಚನವು ಈಗ್ಯೂ ಅನೇಕ ಆರ್ಯರಲ್ಲಿ ಮನೆಮಾಡಿಕೊಂಡಿರುವದನ್ನು ನಾವು ಕಾಣಬಹುದು.

**ಪ್ರೊ. ಮ್ಯಾಕ್ಸಮುಲ್ಲರರು ಅನ್ನುವದು:—** ನಾನು ಅನೇಕ ಸಂಸ್ಕೃತ ಪಂಡಿತರನ್ನು ಕಂಡದ್ದಾಯಿತು; ಅಲ್ಲದೆ ಹಲವು ಯುರೋಪಿಯ ಪಂಡಿತರನ್ನೂ ಬಲ್ಲೆ; ಇವರಿಬ್ಬರ ಸ್ವಭಾವವನ್ನು ಕುರಿತು ನನ್ನ ಮನಸಿನಲ್ಲಿಯೇ ತೂಕ ಮಾಡಲಾಗಿ ಹಿಂದೂಪಂಡಿತರಲ್ಲಿ ಸತ್ಯಪ್ರೀತಿ ಮನಸಿನ ಔದಾರ್ಯ ಈ ಗುಣಗಳು ಹೆಚ್ಚಾಗಿರುವವೆಂಬುದು ಕಳೆದ ೨೦ ವರ್ಷಗಳ ನನ್ನ ಅನುಭವದಿಂದ ತಿಳಿಯಬಂತು. ಅವರಲ್ಲಿ ಸಾಮರ್ಥ್ಯವಿದೆ; ಹುಂಬತನವಿಲ್ಲ. ಅವರು ತಮ್ಮ ತಪ್ಪನ್ನು ಕೂಡಲೇ ಒಪ್ಪುವರು; ಸತ್ಯಕ್ಕೆ ಅವರೆಂದೂ ಹಿಂದಾಗರು; ಹಿಂದೂವರ್ತಕರು ವ್ಯಾಪಾರದಲ್ಲಿ ಕೂಡ ಯಾವ ದೇಶದವರಿಗಿಂತಲೂ ಮಿಗಿಲಾಗಿರುವರೆಂದು ನನ್ನ ಇಂಗ್ಲೀಷ ಗೆಳೆಯರು ಆಡಿತೋರಿಸಿದ್ದಾರೆ.

**ವಾರನ್ ಹೆಸ್ಟಿಂಗ್ಸರು ೧೮೧೩ ಇಸ್ವಿಯಲ್ಲಿ ಪಾರ್ಲಮೆಂಟಿದ ಮಂಡಲಗಳ ಮುಂದೆ ಸಾಕ್ಷಿ ಕೊಡುವಾಗ ಸಾರುವದು:—** ಹಿಂದುಗಳು ಸಭ್ಯರು, ಪರೋಪಕಾರಿಗಳು, ಬಹುಕೃತಜ್ಞರು; ನಂಬಿಗಸ್ತರು ಮತ್ತು ಸ್ನೇಹಭಾವದವರು.

**ಬಿಶಪ್ ಹೇಬೆರರು ಅನ್ನುವದು:—** ನಾಗರಿಕ ಜನರ ಸ್ವಭಾವ–ಗುಣಗಳು ಹಿಂದೂಜನರಲ್ಲಿ ಇಲ್ಲವೆನ್ನುವದು ಬಹು ಧಾರ್ಷ್ಟ್ಯದ ಮಾತೇ ಸರಿ! ಅವರು ನಿಶ್ಚಿತವಾಗಿ ಸೌಮ್ಯಸ್ವಭಾವದವರು, ಬುದ್ಧಿವಂತರು, ಉದಾರರು, ಧೈರ್ಯವಂತರು. ಯಾವ ದೇಶದ ಮನುಷ್ಯರಲ್ಲಿ ಕಾಣದ ಮಿತ

ಚಟವು, ಮತ್ತು ಸ್ವಾಭಾವಿಕ ಬುದ್ಧಿ, ಸೂಕ್ಷ್ಮತನ ಇವರಲ್ಲಿ ಹೆಚ್ಚು.

**ಮಿ. ಎಲ್‌ಫಿನ್‌ಸ್ಟನ್ ಸಾಹೇಬರು ತಮ್ಮ ಹಿಂದುಸ್ಥಾನದ ಇತಿಹಾಸದಲ್ಲಿ ಬರೆಯುವದು:—** ಇಂಗ್ಲಂಡಕ್ಕಿಂತ ಹಿಂದುಸ್ಥಾನದಲ್ಲಿ ಅಪರಾಧಿಗಳ ಸಂಖ್ಯೆ ಕಡಿಮೆ; ಹಿಂದೂಜನರಲ್ಲಿ ಕುಡುಕತನವು ಮತ್ತು ಜಾರ ಕರ್ಮವು ಬಹು ಕಡಿಮೆಯಿರುವದರಿಂದ ಅವರು ಶ್ರೇಷ್ಠರೆನ್ನಲಿಕ್ಕೇನೂ ಅಡ್ಡಿಯಿಲ್ಲ. ಇಂಗ್ಲಂಡದಲ್ಲಿ ಪ್ರತಿವರ್ಷಕ್ಕೆ ಮರಣದಂಡನೆಯ ಶಿಕ್ಷೆಗಳು ೧೨೩೨ ಜನರಿಗಾದರೆ ಬಂಗಾಲದಲ್ಲಿ ೫೯ ಮಾತ್ರ; ಇಂಗ್ಲಂಡದ ಜನಸಂಖ್ಯೆ ೧ ಕೋಟಿ ೩೦ ಲಕ್ಷ ಆದರೆ ಬಂಗಾಲದ್ದು ೬ ಕೋಟಿ ಅಂದ ಮೇಲೆ ನೀವೇ ಯೋಚಿಸಿರಿ ! ಇದರಂತೆ ಕಳವು ತುಡುಗು, ಗಡಿಪಾರಿನ ಶಿಕ್ಷೆ ಮುಂತಾದವುಗಳು ಇಂಗ್ಲಂಡದಲ್ಲಿ ಅಪರಿಮಿತ; ಅಲ್ಲಿಯ ಸ್ಥಿತಿಗೂ ಹಿಂದುಸ್ಥಾನದ ಸ್ಥಿತಿಗೂ ಅಜಗಜಾಂತರ.

**ಡಾರ್ವಿನ್ಸನು** ಹಿಂದೂ ಅಪರಾಧಿಗಳ ಬಗ್ಗೆ ತೆಗೆದ ಉದ್ಗಾರಗಳು—

ಪೋರ್ಟ ಲುಯಿಯಲ್ಲಿದ್ದ ಹಿಂದೂ ಅಪರಾಧಿಗಳ ಸ್ವಚ್ಛತೆ, ಅವರ ಶಾಂತ ಸ್ವಭಾವ, ಪ್ರಾಮಾಣಿಕತೆ, ಧರ್ಮಾಚರಣೆ ಮುಂತಾದವುಗಳನ್ನು ನೋಡಿದರೆ, ಅವರನ್ನು ಮಿಕ್ಕ ಅಪರಾಧಿಗಳಂತೆ ನೋಡಲಿಕ್ಕಾಗದು.

**ಸರ ಥಾಮಸ್ ಮನ್ರೋ ಅವರೆನ್ನುವದು:—** ಹಿಂದೂಗಳ ಒಕ್ಕಲತನದ ಜಾಣ್ಮೆ, ಅಪ್ರತಿಮವಾದ ಕೈಗಾರಿಕೆಯ ಕೈಮೆ, ಅವರು ತಮ್ಮ ಮಕ್ಕಳಿಗೆ ಶಾಲೆಯಲ್ಲಿ ಕಲಿಸುವ ಓದು, ಬರಹ, ಲೆಕ್ಕ, ಬರುಹೋಗುವವರಿಗೆ ಮಾಡುವ ಆದರ ಸತ್ಕಾರ, ದಾನಧರ್ಮ, ಹೆಂಗಸರನ್ನು ಮರ್ಯಾದೆಯಿಂದಲೂ, ನಂಬಿಗೆಯಿಂದಲೂ ನಡಿಸಿಕೊಳ್ಳುವ ಅವರ ರೀತಿ, ಮುಂತಾದವುಗಳನ್ನೆಲ್ಲ ಲಕ್ಷಿಸಿದರೆ, ಅವರು ಬಹು ಸುಧಾರಿಸಿದ ಜನಾಂಗದವರೆಂಬುದು ಮನದಟ್ಟಾಗುವದಷ್ಟೇ ಅಲ್ಲದೆ ಯುರೋಪದೊಳಗಿನ ಯಾವುದೇ ಒಂದು ಜನಾಂಗದವರಿಗಿಂತ ಶ್ರೇಷ್ಠರಾದವರೆಂಬುದು ಸ್ಪಷ್ಟವಾಗುತ್ತದೆ.

ಪ್ರಾಚೀನ ವಿಶ್ವವಿದ್ಯಾಲಯಗಳಲ್ಲಿ ನಾಲಂದ, ತಕ್ಷಶಿಲಾ, ಶ್ರೀಧಾನ್ಯ,

---

**ಟಿಪ್ಪಣಿ— ಈ ಬಗ್ಗೆ ಎಲ್‌ಫಿನಸ್ಟನ್ ಸಾಹೇಬರು ತಮ್ಮ ಇತಿಹಾಸದಲ್ಲಿ ಬರೆಯುವದು— ( ೧೮೩೨ ನೇ ಇಸ್ವಿಯಲ್ಲಿ ) ಹಿಂದುಸ್ಥಾನದಲ್ಲಿ ನಡೆಯುವ ಅಪರಾಧಗಳ ಸಂಖ್ಯೆ ಬಹು ಕಡಿಮೆಯಿತ್ತು. ಲಕ್ಷಕ್ಕೆ ಒಬ್ಬಿಬ್ಬ ಅಪರಾಧಿಗಳು ಸಿಗುತ್ತಿದ್ದರು.**

ಕಟಕ ಇವೇ ಮುಖ್ಯವಾದವುಗಳು. ಈ ಬಗ್ಗೆ ಹಿಂದೂದೇಶದ ಪ್ರಖ್ಯಾತ ಚರಿತ್ರೆಗಾರರಾದ **ಮಿ. ಹ್ಯಾವೆಲ್ಲರು ಅನ್ನುವದು:—**ಈ ವಿಶ್ವವಿದ್ಯಾಲಯಗಳಲ್ಲಿ ದೊರಕುವ ಶಿಕ್ಷಣವು ಮನೋವ್ಯೈಶಾಲ್ಯ, ಹಾಗೂ ಹೃದಯವಿಕಾಸವಾಗುವಂಥ ತತ್ವಗಳ ಮೇಲೆ ರಚಿಸಲ್ಪಟ್ಟದ್ದಿತು."

**ಎಲ್‌ಫಿನ್‌ಸ್ಟನ್ ಸಾಹೇಬರು ಹಿಂದೂಗಳ ಸ್ವಚ್ಛತೆಯನ್ನು ಕುರಿತು ಬರೆಯುವದು:—** "ಹಿಂದೂ ಜನರ ಸ್ವಚ್ಛತೆಯೆಂದರೆ ಎಲ್ಲರಿಗೂ ಗಾದೆಯ ಮಾತಾಗುವಷ್ಟು ಅನುಕರಣೀಯವಿದೆ. ಯುರೋಪದಲ್ಲಿಯ ದಕ್ಷಿಣ ಜನಾಂಗದವರೊಡನೆ ಮಾತ್ರ ನಾವು ಹಿಂದೂಗಳ ಸ್ವಚ್ಛತೆಯನ್ನು ಹೋಲಿಸಬಹುದಾಗಿದೆ. ಅವರ ಅನೇಕ ಒಳ್ಳೇ ಪದ್ಧತಿಗಳನ್ನು ನಾವು ಕೂಡ ಅನುಸರಿಸಬಹುದಾಗಿದೆ;" ಮುಂದೆ ಅವರೇ ಅನ್ನುವದು:—ಹಿಂದೂ ಜನರಲ್ಲಿ ಕೃತಜ್ಞತೆಯು ಕಡಮೆಯೆಂದು ಕೆಲವರು ಆರೋಪಿಸುವದುಂಟು; ಒಳ್ಳೆಯ ಒಡೆಯನಿದ್ದರೆ ಅವನಿಗೆ ಹಿಂದೂಗಳು ಬಲು ಬಾಗಿ ನಡೆದು ಅವನ ಮನಸನ್ನೇ ಎಳೆಯುವರು. ಆಪತ್ಕಾಲದಲ್ಲಾಗಲಿ, ಜಡ್ಡಿನ ಸಮಯದಲ್ಲಾಗಲಿ, ಹಿಂದೂಜನರ ಸಹಾನುಭೂತಿಯ ಅನುಭವವು ಹಲವರಿಗೆ ಪ್ರತೀತವಾಗಿದೆ. **ಹಿಂದೂ ಸಿಪಾಯಿಗಳಂತೂ ಪರಕೀಯರಾದ ಇಂಗ್ಲೀಷರ ವಿಷಯದಲ್ಲಿ ತೋರ್ಪಡಿಸಿದ ಉದಾಹರಣೆಯನ್ನು ಯಾವ ದೇಶದ ರಾಷ್ಟ್ರೀಯ ಸೈನಿಕರಲ್ಲಿಯೂ ನೋಡಲಿಕ್ಕೆ ಸಿಗದು.**

"ಹಿಂದೂಗಳ ಊಟ ಉಡಿಗೆ ಇರುವಿಕೆಗಳು ಬಹು ಮೇಲ್ತರಗತಿಯವಿದ್ದುದರಿಂದ ಅವರ ಆರೋಗ್ಯವು ಚನ್ನಾಗಿತ್ತು. ಮಧ್ಯಮ ವಯಸ್ಸಿನವರಾದರೂ ದೃಢಕಾಯದವರು ಜನರಲ್ಲಿ ಬಲು ಮಂದಿ ಸಿಗುತ್ತಿದ್ದ" ರೆಂದು ಮಿ. ಬೋರ್ಡಿಲನ್ನ ಎಂಬ ಸಾಹೇಬರು ಬರೆದಿಟ್ಟಿದ್ದಾರೆ. ೧೦ ಸಾವಿರ ಜನರಲ್ಲಿ ಯಾವನೋ ಒಬ್ಬನು ಹಿಂದುಸ್ಥಾನದಲ್ಲಿ ಹುಚ್ಚನಿದ್ದರೆ ಇಂಗ್ಲಂಡದಲ್ಲಿ ೧೦ ಸಾವಿರ ಜನರಲ್ಲಿ ೩೦ ಮಂದಿ ಶಿಗುತ್ತಿದ್ದರೆಂದು ೧೮೮೧ ಇಸ್ವಿಯ ಬಂಗಾಲದ ಜನಗಣನೆಯಲ್ಲಿ ಉಲ್ಲೇಖವಿದೆ. ಹಿಂದೂಜನರ ನಡೆನುಡಿ

* ಬಂಗಾಲದೊಳಗೆ ೮೦ ಸಾವಿರ ಅಯ್ಯನವರ ಶಾಲೆಗಳಿದ್ದವೆಂದೂ ೧೮೩೫ ಇಸ್ವಿಯ ವರದಿಯ ಮೇರೆಗೆ ಸುಮಾರು ೪೦೦ ಜನಕ್ಕೊಂದರಂತೆ ಹಳ್ಳಿಯ ಶಾಲೆಗಳಿದ್ದವೆಂದೂ ಮಿಶನರಿ ಪತ್ರಿಕೆಯಿಂದ ತಿಳಿಯುತ್ತದೆ.

ಗಳ ಬಗ್ಗೆ **ಮಿ. ವಾರ್ಡ ಎಂಬ ಸಾಹೇಬರನ್ನುವದು:—** ಸಾರ್ವಜನಿಕ ನಡೆನುಡಿಗಳಲ್ಲಿ ಹಿಂದೂಜನರು ಎಲ್ಲ ಜನಾಂಗಗಳಲ್ಲಿಯೂ ಬಹು ಮರ್ಯಾದೆ ಶೀಲರೆಂದು ಹೇಳಲಿಕ್ಕೇನೂ ಅಭ್ಯಂತರವಿಲ್ಲ.

ಹಿಂದೂಜನರ ಶಾರೀರಿಕ ರಚನೆಯನ್ನು ಕುರಿತು ಬರೆಯುವಾಗ ಹಲವು ಪಾಶ್ಚಾತ್ಯ ಬರಹಗಾರರು "ಜಗತ್ತಿನಲ್ಲಿರುವ ಯಾವುದೇ ಒಂದು ಜನಾಂಗದ ಜನರಿಗಿಂತ ಹಿಂದೂಜನರ ಮೈಕಟ್ಟು ಬಹು ಸ್ಪೃಹಣೀಯ ವಾಗಿದೆ." ಎಂದು ಉಸುರಿರುವರು.

**ಮಿ. ಆರ್ಮೆಯುವರನ್ನುವದು:—** ಗುಜರಾತದ ಬನಿಯಾ (ಬಣಜಿಗ) ಜನರಿಗಿಂತ ಅಂದವಾದ ಜನರನ್ನು ಜಗತ್ತಿನಲ್ಲಿಯೇ ಕಾಣು ವದು ಅಸಾಧ್ಯ.

**ಮಿ. ಮಿಲ್ಲರು:—** ಹಿಂದೂಜನರ ದೇಹ ಚಾಪಲ್ಯವನ್ನು ಕುರಿತು ಬರೆಯುವಾಗ "ಪ್ರತಿಯೊಂದು ಜನಾಂಗದವರು ಆಶ್ಚರ್ಯಪಡುವಷ್ಟು ಹಿಂದೂಜನರ ದೇಹ ಚಾಪಲ್ಯವಿದೆ. ಶಾರೀರಿಕ ಕಸರತ್ತುಗಳಲ್ಲಿ ಆಟ ಓಟಗಳಲ್ಲಿ ಅವರು ನಾನಾ ಎಂದು ಮೆರೆಯುವ ಜಗದೊಳಗಿನ ಗಟ್ಟಿ ಜನಾಂಗದವರನ್ನೂ ಮೀರಿಸುವದುಂಟು.

ಹಿಂದೂಜನರ ಬುದ್ಧಿ ವೈಭವವನ್ನು ಕುರಿತು:—

**ಮಿ. ಕೋಲಮನ್ನರನ್ನುವದು:—** ಹಿಂದುಸ್ಥಾನದ ಋಷಿಗಳು ಮತ್ತು ಕವಿಗಳು ಮಾಡಿದ ನೀತಿಯುಬೋಧ ಹಾಗೂ ವ್ಯಕ್ತಪಡಿಸಿದ ಕಾವ್ಯ ಸೌಂದರ್ಯವನ್ನು ಲಕ್ಷಿಸಿದರೆ, ಜಗತ್ತಿನಲ್ಲಿಯ ಯಾವ ಜನಾಂಗದವ ರಾದರೂ ನಾಚಿಕೆಯಿಂದ ತಲೆಬಾಗಿಸದಿರರು. ಅವರು ಅತೀಂದ್ರಿಯಜ್ಞ ರಾಗಿದ್ದರೆಂಬುದಕ್ಕೆ ಅವರ ಬೋಧಸರ ಕವನವೇ ಸಾಕಷ್ಟು ಬಲವಾದ ಉದಾಹರಣೆಯಾಗಿದೆ. ಹಿಂದೂಜನರ ಬುದ್ಧಿಯಿಂದ ಹೊರಟ ಪಗಡಿ, ಚದುರಂಗ ಮುಂತಾದ ಆಟಗಳು ಅವರ ಬುದ್ಧಿಬಲವನ್ನು ತೋರಿಸುತ್ತವೆ. ಚದುರಂಗದಾಟವು ಮೂಲ ಹಿಂದೂಗಳದೇ ಎಂದೂ, ಅದನ್ನೇ ಇರಾಣಿ ಯರು ಶತುರಂಗ ಎಂದು ಆಡುವರೆಂದೂ ತಿಳಿಯುತ್ತದೆ.

ತತ್ಕಾಲೀನ ಹಿಂದೂ ಮುಸಲ್ಮಾನರ ಸ್ನೇಹ ಸಂಬಂಧ ಹಾಗೂ ಶೀಲಸ್ವಭಾವಗಳು ಹೇಗಿದ್ದವೆಂಬುದನ್ನೋದಿದರೆ ಆಶ್ಚರ್ಯವೆನಿಸುವದು.

ಹಿಂದೂ ಮುಸಲ್ಮಾನರು ಒಂದೊಂದು ವೇಳೆಯಲ್ಲಿ ಕಡುವೈರಿಗಳಂತೆ ನಡೆದ ಸಂಗತಿಗಳಿದ್ದಂತೆಯೇ ಒಡ ಹುಟ್ಟಿದ ಅಣ್ಣ ತಮ್ಮಂದಿರಂತೆ ನಡೆದು, ಒಬ್ಬರಿಗೊಬ್ಬರು ಸಂಕಟಕಾಲದಲ್ಲಿ ನೆರವಾದ ಉದಾಹರಣೆಗಳೇನೂ ಕಡಿಮೆಯಿಲ್ಲ; ಬರಿಯ ಜಾತಿಯ ಮೇಲಿಂದಲೇ ಒಮ್ಮೊಮ್ಮೆ ವ್ಯಕ್ತಿಗಳನ್ನು ಪರೀಕ್ಷಿಸ ಹೋದರೆ ತಪ್ಪಾಗುವದು; ಯಾವುದೇ ಒಂದು ಜಾತಿಯಲ್ಲಿಯೇ ಆಗಲಿ, ಅಪವಾದವೆಂದು ಕೆಲವು ದೊಡ್ಡಮನಸ್ಸಿನ ವ್ಯಕ್ತಿಗಳು ಇದ್ದೇ ಇರುವರು. ಹುಮಾಯೂನನ ಸಂಗತಿಯೊಂದನ್ನು ಬರೆಯುವಾಗ **ಸರ ಆರ್ಥರ ಹೆಲ್ಪ್ಸ ಎಂಬ ಯುರೋಪಿಯರು ಅನ್ನುವದು:—** ಕಾರ್ಮೋಡವಿದ್ದರೂ, ಅದರ ಅಂಚು ಬೆಳ್ಳಿಯಂತೆ ಬೆಳಗುತ್ತಿರುವದುಂಟು; ಕೆಲ ಮುಸಲ್ಮಾನ ಅರಸರು ಹಿಂದೂಗಳ ಸಲುವಾಗಿ ಅತ್ಯಂತ ಔದಾರ್ಯದ ನಡೆಯನ್ನು ತೋರಿಸಿದ ಸಂಗತಿಗಳು ಅವೆ; ಅವುಗಳಲ್ಲಿ ಚಿತ್ತೂರಿನ ರಾಣಾ ಸಂಗನ ಮಗನಾದ ವಿಕ್ರಮಜಿತನದೊಂದಾಗಿದೆ. ಈತನು ಹರಾವತಿಯಲ್ಲಿರುವಾಗ ಗುಜರಾತದ ಅರಸನಾದ ಬಹಾದ್ದೂರನು ಮೇವಾಡವನ್ನು ಮುತ್ತಿದನು; ಚಿತ್ತೂರಿನ ಕೋಟೆಯು ಗುಜರಾತ ಹಾಗೂ ಮಾಳವೆಯರ ಕೈಸೇರಿತು; ಈ ಕಾಲಕ್ಕೆ ರಾಣಾಸಂಗನ ಹೆಂಡತಿಯಾದ ಮಹಾರಾಣಿ ಕರ್ಣಾವತಿಯು ಕೋಟೆಯಲ್ಲಿಯೇ ಇದ್ದುದರಿಂದ, ಇಂಥ ಸಂಕಟ ಕಾಲಕ್ಕೆ ತನಗೆ ನೆರವಾಗಬೇಕೆಂದು ಮಹಾರಾಣಿಯು ಮೊಗಲ ರಾಜನಾದ ಹುಮಾಯೂನನಿಗೆ ಬಿನ್ನವಿಸಿಕೊಂಡಳು; ಹುಮಾಯೂನನೆಂದರೆ, ತನ್ನ 'ರಾಖೀಬಂದ ಭಾಯಿ' ಎಂದು ಎಣಿಸಿದ್ದಳು. ಮಹಾರಾಣಿಯ ಮಾತನ್ನು ಕೇಳಿ ಹುಮಾಯೂನನಾದರೂ ನಿಜವಾದ ಶೂರನಿಗೊಪ್ಪುವಂತೆ, ಬಂಗಾಲಕ್ಕೆ ದಂಡೆತ್ತಿ ಹೋಗಲು ಸಿದ್ಧನಾಗಿನಿಂತ ತನ್ನ ಕೆಲಸವನ್ನು ಬದಿಗೊತ್ತಿ ತನ್ನ ತಂಗಿಯೆಂದು ತಿಳಿದ ಚಿತ್ತೂರಿನ ರಾಣಿಗೆ ನೆರವಾಗಲು ಧಾವಿಸಿದನು; ಆಗ ಅವನು ಶತ್ರುಗಳನ್ನು ಓಡಿಸಿದ್ದಲ್ಲದೆ, ಮಾಂಡೂ ಎಂಬ ಊರನ್ನೂ ಗೆದ್ದು ಕೊಡಿಸಿದನು; ಮತ್ತೊಂದು ಕಥೆ, ಮಾರವಾಡದ ಅರಸನು ಒಳ್ಳೇ ಬಿಕ್ಕಟ್ಟಿನಲ್ಲಿ ಸಿಲುಕಿರಲು, ಅವನನ್ನು ಒಬ್ಬ ಮುಸಲ್ಮಾನ ಬಂಧುವೇ ರಕ್ಷಿಸಿದನೆಂಬುದನ್ನು ಮರೆಯಲಾಗದು; ಔರಂಗಜೇಬನು ಮಾರವಾಡದ ಮೇಲೆ ದಂಡೆತ್ತಿ ಹೋದಾಗ, ಅಲ್ಲಿಯ ರಾಜನಿಗೆ ಆತನ ಮಗುವನ್ನು ತನ್ನ ವಶಕ್ಕೆ ಕೊಡಲು

ಕೇಳಿದನು. ಇಷ್ಟೇ ಅಲ್ಲದೆ, ತಮ್ಮ ರಾಜಪುತ್ರನನ್ನು ತನಗೆ ಒಪ್ಪಿಸುವ ಸರದಾರರಲ್ಲಿ ಮಾಂಡಳಿಕವನ್ನು ಹಂಚಿಕೊಡುವೆನೆಂದೂ ಆಶೆ ತೋರಿಸಿದನು; ಆದರೆ, ಆ ಸರದಾರರು ಔರಂಗಜೇಬನನ್ನು ಕುರಿತು ಅಂದದ್ದು:— " ನಮ್ಮ ದೇಶವು ನಮ್ಮ ಬಾಹು ಬಲದಲ್ಲಿದೆ; ಈ ಬಾಹುಗಳು ನಮ್ಮ ದೇಶವನ್ನೂ ನಮ್ಮ ಒಡೆಯನನ್ನೂ ಕಾಪಾಡುವೆವು. " ಆಗ ಔರಂಗಜೇಬನು ಕಾಯ್ದು ಕೆಂಡಾಗಿ ಆ ಸ್ಥಳಬಿಟ್ಟು ನಡೆದು, ಯುದ್ಧ ಹೂಡಿದನು; ರಜಪೂತರಿಗೂ ಮುಸಲ್ಮಾನರಿಗೂ ಯುದ್ಧವೆಸಗಿತು; ಔರಂಗಜೇಬನು ಕಣ್ಣಿಟ್ಟಿರುವ ರಾಜಪುತ್ರನನ್ನೇ ರಕ್ಷಿಸುವದು ರಜಪೂತ ಸರದಾರರ ಮೊದಲನೇ ಕರ್ತವ್ಯವಾಗಿತ್ತು; ಆದುದರಿಂದ ಅವರು ಆ ರಾಜಪುತ್ರನನ್ನು ಮಿಠಾಯಿಯ ಒಂದು ದೊಡ್ಡ ಬುಟ್ಟಿಯಲ್ಲಿ ಹಾಕಿ, ಆ ಬುಟ್ಟಿಯನ್ನು ದುರ್ಗಾದಾಸನಿಗೆ ಮುಟ್ಟಿಸಲು ಒಬ್ಬ ಮುಸಲ್ಮಾನ ಬಂಧುವಿಗೆ ಹೇಳಿದರು. ಅದರಂತೆ ಅವನು ನಂಬಿಗಸ್ತನಾಗಿ ತನ್ನ ಕರ್ತವ್ಯವನ್ನು ಈಡೇರಿಸಿ, ಧನ್ಯವಾದಗಳನ್ನು ಪಡೆದನು.

**ಹ್ಯುಯೆನಸಂಗ:—** ಈ ಚೀನ ಪ್ರವಾಸಿಯು ಪುಲಿಕೇಶಿಯ ಕಾಲಕ್ಕೆ ಹಿಂದುಸ್ಥಾನಕ್ಕೆ ಬಂದು ಕನ್ನಡಿಗರ ಬಗ್ಗೆ ಕೆಳಗೆ ಕಾಣಿಸಿದಂತೆ ತನ್ನ ಲೆಕ್ಕಣಿಕೆಯ ಸಾಕ್ಷಿ ಕೊಟ್ಟಿರುವನು:— ಇಲ್ಲಿಯ ಜನರ ನಡೆನುಡಿಗಳು ಬಹು ಸಾಧು ಮತ್ತು ಪ್ರಾಮಾಣಿಕ, ಇವರ ನಿಲುವಿಕೆ ಎತ್ತರ, ಸ್ವಭಾವದಿಂದ ಇವರು ಕೆಲಮಟ್ಟಿಗೆ ಬಿಂಕದವರು. ಯಾರಾದರೂ ಇವರ ಮೇಲೆ ಉಪಕಾರ ಮಾಡಿದರೆ ಅವರಿಗೆ ಬಹು ಕೃತಜ್ಞರಾಗಿರುವರು; ಆದರೆ ಇವರಿಗೆ ಅಪಕಾರ ಮಾಡಿದವನು ಪೆಟ್ಟು ತಿನ್ನದೆ ಎಂದೂ ಪಾರಾಗಲಾರನು; ಮಾನಧನರಿವರು; ತಮ್ಮ ವತನವು ಯಾರಿಂದಾದರೂ ಅನ್ಯಾಯವಾಗಿ ಮುಕ್ಕಾದರೆ, ಪ್ರಾಣದ ಬೆಲೆಗೊಟ್ಟು ಅದನ್ನು ರಕ್ಷಿಸಲು ಮುಂದಾಗುವರು. ಶರಣು ಬಂದವರಿಗಂತೂ ಅವರು ತಮ್ಮ ಜೀವದ ಹಂಗು ತೊರೆದು ನೆರವಾಗುವರು; ಇವರ ಶೌರ್ಯ, ವೀರ್ಯ, ಪ್ರಾಮಾಣಿಕತನದ ಬಗ್ಗೆ ಯಾರಿಗಾದರೂ ಅತ್ಯಾದರವೆನಿಸದಿರದು.

---

# ೬ ನೆಯ ಪ್ರಕರಣ.

## ಸ್ವದೇಶಾಭಿಮಾನ.

उपस्थास्ते अनमीवा अयक्ष्मा ।
अस्मभ्यं सन्तु पृथिवी प्रसूताः ॥
दीर्घं न आयुःप्रतिबुध्यमाना ।
वयं तुभ्यं बलिहृतः स्याम ॥
यस्यां पूर्वे पूर्वजना विचक्रिरे ।
यस्यां देवा असुरानभ्यवर्तयन् ॥
गवामश्वानां वयसश्च विष्टा ।
भगं वर्चः पृथिवी नो दधातु ॥

(अथर्व कां० १२ सू०)

**ಅರ್ಥ:—** ಹೇ ಮಾತೃಭೂಮಿ ? ನಿನ್ನಿಂದ ಉತ್ಪನ್ನವಾದ ಪದಾರ್ಥಗಳೆಲ್ಲ ನಮಗೆ ದೊರೆಯುಲಿ! ಅವುಗಳಿಂದ ನಮ್ಮ ರೋಗಗಳು ನಾಶವಾಗಿ ನಮ್ಮ ಆರೋಗ್ಯ ಬೆಳೆಯುಲಿ! ಜ್ಞಾನ-ವಿಜ್ಞಾನಗಳಲ್ಲಿ ನಾವು ಪಾರಂಗತರೂ, ದೀರ್ಘಾಯುಗಳೂ ಆಗಿ ನಿನಗೋಸ್ಕರ ನಮ್ಮ ಸರ್ವಸ್ವವನ್ನೂ ಬಲಿಕೊಡಲು ಸಿದ್ಧರಿದ್ದೇವೆ. ಯಾವ ದೇಶದಲ್ಲಿಯ ಪೂರ್ವಿಕರಾದ ಸಜ್ಜನರು ಪರಾಕ್ರಮ ಬಲದಿಂದ ದುರ್ಜನರನ್ನು ಸೋಲಿಸಿದರೋ, ಯಾವಾಕೆಯಲ್ಲಿ ಆಕಳು, ಕುದುರೆ, ಪಕ್ಷಿ ಮುಂತಾದವುಗಳು ಹೇರಳವಾಗಿರುವವೋ ಆ ನಮ್ಮ ಮಾತೃಭೂಮಿಯು ನಮ್ಮ ತೇಜ-ಐಶ್ವರ್ಯಾದಿಗಳನ್ನು ಹೆಚ್ಚಿಸಲಿ !

ಸ್ವದೇಶಾಭಿಮಾನವೆಂಬುದು ಸುಧಾರಿಸಿದ ಜನಾಂಗಗಳಲ್ಲಿಯ ಜನರ ಹುಟ್ಟು-ಗುಣವಾಗಿರುತ್ತದೆ. ಋಗ್ವೇದ ಕಾಲದಿಂದಲೂ ಜನ್ಮಭೂಮಿಯು ಸ್ವರ್ಗಕ್ಕಿಂತ ಮೇಲು ಎಂಬುದು ಆರ್ಯರ ಪಲ್ಲವಿಯಾಗಿದೆ; ಮತ್ತು ಇದನ್ನು ಆರ್ಯರು ತಮ್ಮ ಸಾವಿರಗಟ್ಟಲೆ ವರ್ಷದ ಇತಿಹಾಸದಲ್ಲಿ ಅನೇಕ ಸಾರೆ ಕಾರ್ಯತಃ ತೋರಿಸಿರುವರು; ಭರತಖಂಡದೊಳಗೆ ಮನುಷ್ಯನಾಗಿ

ಹುಟ್ಟುವದು, ಮತ್ತು ಸಾಯುವದು ಅದೆಷ್ಟು ಜನ್ಮದ ಪುಣ್ಯವೋ ಎಂದು ಅನೇಕಸಲ ಹಾಡಿದ್ದಾರೆ; ಭಾರತೀಯರ ದೇಶಾಭಿಮಾನದ ಮಾದರಿಯನ್ನು ನೋಡಬೇಕೆಂದರೆ ನಾವು ರಜಪುತರನ್ನು ಲಕ್ಷಿಸಬೇಕು. ದೇಶಕ್ಕಾಗಿ ರಣದೊಳಗೆ ಮಡಿಯುವ ಮನುಷ್ಯನ ಕೈಯಲ್ಲಿಯ ಖಡ್ಗವೇ ಅವನನ್ನು ಸ್ವರ್ಗಕ್ಕೊಯ್ಯುವ ಸ್ಥಿರವಾದ ಸಾಧನವು ಎಂದು ರಜಪುತರ ಮನೋಭಾವನೆಯಾಗಿತ್ತು; ಸ್ವದೇಶದ ಹೆಸರೆತ್ತಿದೊಡನೆ, ಕಡಲು ಕದಡಿದಂತೆ ರಜಪುತರ ಮನಃಸ್ಥಿತಿಯಾಗಿ, ಅವರು ಅದರ ರಕ್ಷಣೆಗಾಗಿ ಪ್ರಾಣವನ್ನಿಳಿದೆಗೆಯಲು ಹಿಂತೆಗೆಯುತ್ತಿದ್ದಿಲ್ಲ; ಅಂದಮೇಲೆ ಮನೆ–ಮಾರು, ಹೆಂಡಿರು ಮಕ್ಕಳು–ಆಸ್ತಿ–ಪಾಸ್ತಿಯನ್ನಾರು ಕೇಳಬೇಕು?

ಸ್ವದೇಶಾಭಿಮಾನದ ಅಚ್ಚ ಕೆಚ್ಚಿನ ಸ್ವರೂಪವನ್ನು ನಾವು ನೋಡಬೇಕೆಂದಿದ್ದರೆ, ಗ್ರೀಸ–ರೋಮಗಳ ಇತಿಹಾಸದ ಸಾವಿರಾರು ಓಲೆಗಳನ್ನೂ, ಯುರೋಪದ ಇತಿಹಾಸದ ಓಲೆಗಳನ್ನೂ ತಿರುವಿ ಹಾಕಿ ಪ್ರಯೋಜನವಿಲ್ಲ. ಸ್ವದೇಶಾಭಿಮಾನವನ್ನು ತಮ್ಮ ಜೀವಮಾನದ, ತಮ್ಮ ಧರ್ಮದ ಜೀವನವನ್ನಾಗಿ ಮಾಡುವ ಅತ್ಯುಚ್ಚ ಹಾಗೂ ಅತ್ಯುದಾತ್ತ ಭಾವನೆಯ ಸ್ವರೂಪವನ್ನೆಲ್ಲಿಯಾದರೂ ಕಣ್ತುಂಬ ನೋಡಿ ಆನಂದ ಪಡಲಿಕ್ಕೆ ಸಿಗುವಂತಿದ್ದರೆ, ಅದು ರಜಪುತಸ್ಥಾನದ ರಾಣಾ ಪ್ರತಾಪ ಹಾಗೂ ಠಾಕೂರ ದುರ್ಗಾದಾಸರಲ್ಲಿಯೇ! ಪ್ರಪಂಚಕ್ಕೆ ಮಿಗಿಲಾದ ಈ ಕಡುಗಲಿಗಳಲ್ಲಿ ದೇಶಾಭಿಮಾನ, ಶೌರ್ಯ, ಔದಾರ್ಯ, ತ್ಯಾಗ, ಮುಂತಾದ ಅರಸು–ಗುಣಗಳು ರೋಮ–ರೋಮಗಳಲ್ಲಿ ಮೈವೆತ್ತಿ ಮೆರೆಯುತ್ತಿದ್ದವು. ಇವರೀರ್ವರ ಜೀವನ ಚರಿತ್ರೆಯೆಂದರೆ, ಅದೊಂದು ದಿಗ್ದೇಶದಲ್ಲಿ ಕಾಣದ ದೇಶಾಭಿಮಾನದ ಇತಿಹಾಸವೇ ಸರಿ! ಸ್ವದೇಶ ರಕ್ಷಣೆಗಾಗಿ ಹಿಡಿಯಷ್ಟು ರಜಪುತವೀರರನ್ನು ಬೆಂಬಲಕ್ಕಿಟ್ಟುಕೊಂಡು, ಮಾತೃಭೂಮಿಯ ಮಂತ್ರವನ್ನುಚ್ಚರಿಸುತ್ತ, ಅತ್ಯಂತ ಬಲಶಾಲಿ ಚಕ್ರವರ್ತಿಯಾದ ಅಕಬರನೊಡನೆ, ಕಾಲು–ಶತಕದ ವರೆಗೆ ಗಿರಿ–ಕಂದರಗಳನ್ನಾಶ್ರಯಿಸಿ ಅಖಂಡವಾಗಿ ಹೋರಾಡಿದ ಆ ಪ್ರತಾಪನನ್ನು ಸರಿಗಟ್ಟುವ ಉದಾಹರಣೆಗಳು ನಮಗೆ ಜಗತ್ತಿನ ಇತಿಹಾಸದಲ್ಲಿ ಎಷ್ಟು ದೊರೆಯುವವು?

**ಕರ್ನಲ್ ಟಾಡರು ಅನ್ನುವದು:—** ಮಹಾರಾಣಾಗಳ ಶ್ರೇಷ್ಠ

ವಂಶದಲ್ಲಿ ಹುಟ್ಟಿದ ಪ್ರತಾಪನಿಗೆ ಜನ-ಬಲ, ಧನ-ಬಲ ಮತ್ತು ಸುತ್ತಿನವರ ಆಶ್ರಯವಿಲ್ಲದಿದ್ದರೂ, ತನ್ನ ವಂಶಕ್ಕೆ ಕಲಂಕ ಹಚ್ಚಬಾರದೆಂಬುವ ಮೀರಿದ ಅಭಿಮಾನದಿಂದ ದೇಹದಲ್ಲಿ ಉಸಿರಿರುವ ವರೆಗೂ ಗುಡ್ಡಬೆಟ್ಟಗಳಲ್ಲಿ ಬೆನ್ನಿಗೆ ಅಮರನೆಂಬ ಕೂಸನ್ನು ಕಟ್ಟಿಕೊಂಡು ಅಲೆದನು; ಅವನನ್ನು ತನ್ನ ಬಲೆಯಲ್ಲಿ ಹಿಡಿಯು ಬೇಕೆಂದು ಅಕಬರನು ಬೇಕಾದಷ್ಟು ಪ್ರಯತ್ನ ಪಟ್ಟರೂ ಕೈಸಾಗದೇ ಹೋಯಿತು; ಮಾರವಾಡ, ಬಿಕಾನೇರ, ಅಂಬರ, ಬುಂದಿ, ಮೊದಲಾದ ಸಂಸ್ಥಾನಗಳ ತನ್ನವರಾದ ಅರಸರು, ಬೆನ್ನಿಗೆಬಿದ್ದ ತಮ್ಮನಾದ ಸಾಗರಸಿಂಗನು ಇವರೆಲ್ಲರೂ ಅಕಬರನಿಗೆ ಅಂಜಿ, ಪ್ರತಾಪನನ್ನು ಬಿಟ್ಟರೂ, ಧೈರ್ಯದ ಕೋಟೆಯುಂತಿದ್ದ ಆ ಪ್ರತಾಪನು ಎದೆಗೆಡದೆ, ತನ್ನ ತಾಯಿ-ಹಾಲು ಕುಡಿದುದನ್ನು ಸಾರ್ಥಕ ಗೊಳಿಸಿದನು. ಬಾಪಾರಾವಳನ ಮಗನು ಮರ್ತ್ಯನಿಗೆ ತಲೆಬಾಗಿಸುವದೆಂದರೆ ಎಂಥ ಮಾತು! ಪ್ರತಾಪನ ಪ್ರತಾಪದಿಂದ ಪುನೀತವಾಗದ ಒಂದಾದರೂ ಕಣಿವೆಯು ಅರವಲಿ ಬೆಟ್ಟದಲ್ಲಿ ದೊರೆಯದು. ಹಳದೀ ಘಟ್ಟವಂತೂ ಮೇವಾಡದ ವೀರಭೂಮಿಯಾಗಿದೆ.

ತನ್ನ ತರುವಾಯ ಮಗನಾದ ಅಮರನು ತನ್ನ ಮಾತೃ ಭೂಮಿಯ ಸ್ವಾತಂತ್ರ್ಯಕ್ಕೆ ಶತ್ರುಗಳಾಗಿರುವವರ ಸಂಗಡ ಕೊನೆಯ ವರೆಗೂ ಯುದ್ಧ ನಡಿಸಲಿಕ್ಕೆಬೇಕೆಂದು ಮಗನಿಂದ ಪ್ರತಾಪನು ಆಣೆ ತೆಗೆದು ಕೊಂಡಿದ್ದನೇನೋ ನಿಜ; ಆದರೆ, ಅವನಿಂದ ಇಂಥ ಭೀಷ್ಮ-ಪ್ರತಿಜ್ಞೆಯು ನೀಗಲಿಕ್ಕಿಲ್ಲೆಂಬುದು ಪ್ರತಾಪನಿಗೆ ಒಂದು ಪ್ರಸಂಗದಲ್ಲಿ ಮನದಟ್ಟಾಯಿತು; ಮಳೆಗಾಲದೊಳಗೆ ಇರಲಿಕ್ಕೆಂದು ಪ್ರತಾಪನು ಪೇಶೋಲಾಯೆಂಬ ನದಿಯ ದಂಡೆಯ ಮೇಲೆ ಗುಡಿಸಲುಗಳನ್ನು ಕಟ್ಟಿಕೊಂಡು ತನ್ನ ಸರದಾರರೊಡನೆ ವಾಸಿಸುತ್ತಿದ್ದನು. ಒಂದಾನೊಂದು ದಿನ ಅಮರನು ಗುಡಿಸಲುಗಳು ಬಹಳ ಗಿಡ್ಡಾಗಿರುವದನ್ನು ಲಕ್ಷಿಸದೆ ಅವಸರದಿಂದ ಒಳಹೊಕ್ಕನು, ಆಗ ಮೇಲಿನ ಚಪ್ಪರದ ಒಂದು ಬಿದಿರಿಗೆ ತೊಡಕಿ ಅಮರನ ರುಮಾಲು ಕೂಡಲೇ ಹರಿಯಿತು. ಈ ಅಪಶಕುನವು ಪ್ರತಾಪನ ಮನಸ್ಸಿನಲ್ಲಿ ನೆಟ್ಟು ತನ್ನಂತೆ ತನ್ನ ಮಗನು ಕಷ್ಟಕ್ಕೀಡಾಗಲಾರನು. ಸ್ವಾತಂತ್ರ್ಯದ ಕಿಚ್ಚಿಗಾಗಿ ನಾವೀಗ ಗುಡಿಸಲುಗಳನ್ನು ಹಾಕಿಕೊಂಡಿರುವ ಸ್ಥಳವೇ ಮುಂದೆ ದೊಡ್ಡ ಅರಮನೆಗಳ ಬೀಡಾಗಬಹುದು. ಯಾವ ಮೇವಾಡದ ಸ್ವಾತಂತ್ರ್ಯಕ್ಕಾಗಿ

ನಾವೀಗ ಹೆಣಗುತ್ತಿರುವೆವೋ, ನಮ್ಮ ವೈನೆತ್ತರ ಬಸಿಯುತ್ತಿರುವೆವೋ, ಅದರ ಕಲ್ಪನೆಯು ಮುಂದೆ ನಷ್ಟವಾಗಿ ಹೋಗುವದು; ಆ ಮೇಲೇನು ನನ್ನ ಸರದಾರರು ಕೂಡ ಅದೇ ದಾರಿ ಹಿಡಿಯುವರು !" ಎಂದು ಬಹು ದುಃಖದಿಂದಲೂ ಮುಂದಿನ ಚಿಂತೆಯಿಂದಲೂ ಪ್ರತಾಪನು ಉಸುರ್ಗರೆದ ನಂತೆ; ಆದರೆ "ಹಾಗೆಂದಿಗೂ ಮಾಡಗೊಡಲಾರೆವು; ಮೇವಾಡವು ಸ್ವತಂತ್ರ" ವಾಗುವವರೆಗೆ ನಾವೆಂದೂ ಈ ಸ್ಥಳದ ಮೇಲೆ ಅರಮನೆ ಕಟ್ಟಗೊಡಲಾರೆ ವೆಂದು ತನ್ನ ಸರದಾರರಿಂದ ಪ್ರತಿಜ್ಞೆಗೊಂಡನಂತರವೇ ಪ್ರತಾಪನು ನೆರಳುತ್ತ ಸಂತೋಷದಿಂದ ಪ್ರಾಣಬಿಟ್ಟನಂತೆ !

ಹಿಂದೂಜನರಲ್ಲಿ ದೇಶಾಭಿಮಾನವಿಲ್ಲವೆನ್ನುವವರು ದುರ್ಗಾದಾಸನ ಚರಿತ್ರೆ ಓದಲಿ ! ಠಾಕೂರಮನೆತನವೇ ದೇಶಾಭಿಮಾನ, ಶೌರ್ಯ, ಪ್ರಾಮಾ ಣಿಕತನ, ಮುಂತಾದವುಗಳ ಬಗ್ಗೆ ಹೆಸರಾದುದು; ಔರಂಗಜೇಬನಿಗೆ ಈ ಠಾಕೋರ ಮನೆತನದವರ ಹೆದರಿಕೆ ಬಹಳಿತ್ತು; ಆದುದರಿಂದ ತಾನು ಮಲಗುವ ಕೋಣೆಯಲ್ಲಿ ಅವನು ದುರ್ಗಾದಾಸ ಹಾಗೂ ಶಿವಾಜಿ ಇವರೀ ರ್ವರ ಭಾವಚಿತ್ರಗಳನ್ನು ಕೊರೆಯಿಸಿಟ್ಟಿದ್ದನಂತೆ ? ಅದರಲ್ಲಿ ದುರ್ಗಾ ದಾಸನು ಕುದುರೆಯ ಮೇಲೆ ಕುಳಿತು, ತನ್ನ ಬರ್ಚಿಯಿಂದ ದಂಟಿನ ಕೆಂಡದ ಮೇಲೆ ರೊಟ್ಟಿ ಸುಡುತ್ತಿರುವದೊಂದು ಚಿತ್ರವಿತ್ತು; "ನಾನು ಅವನನ್ನು (ಶಿವಾಜಿ) ಹೇಗಾದರೂ ಬಲೆಯಲ್ಲಿ ಹಿಡಿಯಬಹುದು; ಆದರೆ, ಈತನು (ದುರ್ಗಾದಾಸನು) ಮಾತ್ರ ನನ್ನ ಗ್ರಹದ ಮೇಲೆಯೇ ಹುಟ್ಟಿರುವನು" ಎಂದು ಆಗಾಗ್ಗೆ ಔರಂಗಜೇಬನು ಅನ್ನುತ್ತಿದ್ದನಂತೆ !

ಕುಲಾಭಿಮಾನ, ಜಾತ್ಯಾಭಿಮಾನ, ದೇಶಾಭಿಮಾನ, ಇವೆಲ್ಲವೂ ಹಿಂದುವಿನ ಬಾಳುವೆಯ ಜೀವನಗಳು. ಇನ್ನೊಂದೇ ಒಂದು ಎದೆ ತಲ್ಲಣಿ ಸುವ ರಜಪುತರ ಕಥೆ ಹೇಳಿ ದೇಶಾಭಿಮಾನದ ಪವಾಡಗಳನ್ನು ಮುಗಿಸು ವೆವು; ಹಮ್ಮು ಎಂಬ ಮುಸಲ್ಮಾನ ಸರದಾರನು ರಾತ್ರಿಯ ಹೊತ್ತಿನಲ್ಲಿ ಬುಂದೀ ಎಂಬ ಕೋಟೆಯ ಮೇಲೆ ಹಲ್ಲೆ ನಡಿಸಲು ಬುಂದಿಯ ರಾಣಾನ ದಂಡಿನವರು ಗಾಬರಿಯಾಗಿ ಓಡಿದರು; ಆದರೆ ಬುಂದಿಯ ಮಹಾರಾಣನು ಇವರಿಂದ ಹಿಮ್ಮೆಟ್ಟದೆ ಅದೇ ಕ್ಷಣಕ್ಕೆ ತನ್ನ ಕೆಚ್ಚಿನ ದಂಡಾಳುಗಳದೊಂದು ಗುಂಪು ಕಟ್ಟಿಕೊಂಡು 'ಬುಂದಿಯನ್ನು ತಿರಿಗಿ ಸಂಪಾದಿಸದೆ ಬಾಯಲ್ಲಿ

ನೀರು ಹಾಕಲಿಕ್ಕಿಲ್ಲ' ವೆಂದು ನಿಶ್ಚಯಿಸಿದನು; ದಳವಾಯಿಗಳಂತೂ ತಿರಿಗಿ ಬುಂದೀ ಕೋಟೆಯನ್ನು ವಶಮಾಡಿಕೊಳ್ಳುವದು ಆಗದ ಮಾತೆಂದು ಹತಾಶ ರಾಗಿ "ನೀವು ಇಂಥ ಘೋರವಾದ ವ್ರತವನ್ನು ದಯವಿಟ್ಟು ಮಾಡಬೇಡಿ ರೆಂದು ಮಹಾರಾಣಾನಿಗೆ ಅಂಗಲಾಚಿ ಬೇಡಿಕೊಂಡರು; ಆದಾಗ್ಯೂ ಹಟ ಬಿಡದೆ "ಬುಂದಿಯು ಕೈಗೆ ಬರದೆ ಊಟವಿಲ್ಲ" ವೆಂಬುವ ಭೀಷ್ಮ ಪ್ರತಿಜ್ಞೆ ಯನ್ನೇನೂ ಅವನು ಬಿಡಲಿಲ್ಲ; ಬುಂದಿಯಂಥ ಬೇರೆ ಒಂದು ಮಣ್ಣಿನ ಕೋಟೆಯನ್ನು ಕಟ್ಟಿ ಅದನ್ನು ಗೆದ್ದು ನಿಮ್ಮ ಪ್ರತಿಜ್ಞೆ ಪೂರ್ತಿ ಮಾಡಿ ಕೊಳ್ಳಿರೆಂದು ಸೂಚಿಸಿದನು; ಅದರಂತೆ ಆ ವೀರರು ಬೇರೊಂದು ಮಣ್ಣಿನ ಬುಂದೀ ಕೋಟೆಯನ್ನು ಕಟ್ಟಿ ಅದರತಿಯಲ್ಲಿ ತಮ್ಮ ಪ್ರಾಣಗಳನ್ನರ್ಪಿಸಿ ಕೃತಾರ್ಥರಾದರು; ಇದರಿಂದ ಬುಂದೀಕೋಟೆಯು ಅವರ ವಶವಾಗ ದಿದ್ದರೂ, ಕೇವಲ ಅದರ ಹೆಸರಿಗೆ ತಮ್ಮ ಪ್ರಾಣಾರ್ಪಣ ಮಾಡುವಷ್ಟು ನಿರ್ಭಯರೂ, ಮೃತ್ಯುವಿಗಂಜದವರೂ, ಇದ್ದರೆಂಬುದು ಮಾತ್ರ ವ್ಯಕ್ತ ವಾಗುತ್ತದೆ; ಕೇವಲ ಕಾಲ್ಪನಿಕ ಧ್ಯೇಯ ಸಾಧನೆಗಾಗಿ ತಮ್ಮ ದೇಹವನ್ನು ಈಡಾಡಿದವರೆಷ್ಟು ಮಂದಿ? ಬುಂದೀ ಕೋಟೆಗಿಂತ ಅದರ ಹೆಸರು ಅವರಿಗೆಷ್ಟು ಜೀವಕ್ಕಿಂತ ಮಿಗಿಲಾಗಿತ್ತೆಂಬುದೇ ಈ ಉದಾಹರಣೆಯಿಂದ ಸ್ಫುಟವಾಗುತ್ತಿದೆ ಮಾತ್ರ!

**ಎಚ್. ಜಿ. ರಾಲಿನ್ಸನ್ನರು:—** ಸಿವಾಜಿಯ ದೇಶಾಭಿಮಾನ ವನ್ನು ಕುರಿತು ಅವನ ಚರಿತ್ರೆಯಲ್ಲಿ ಬರೆಯುವದು:— ತನ್ನ ದೇಶ ಹಿತದ ಬಗ್ಗೆ ಹಗಲಿರುಳೆನ್ನದ ಹಂಬಲವು ಸಿವಾಜಿಯಲ್ಲಿ ಹಳ್ಳದಂತೆ ಧಡಗುಟ್ಟಿ ಹರಿಯುತ್ತಿದ್ದುದರಿಂದ ಇದುವೇ ಮುಂದೆ ದೇವಿಯ ಭಕ್ತಿಯಲ್ಲಿ ಪರಿಣಮಿ ಸಿತು; ಪರರಾಯರ ದವಡೆಗೀಡಾಗಿದ್ದ ತನ್ನ ತಾಯ್ನಾಡನ್ನು ಸ್ವತಂತ್ರ ಗೊಳಿಸಲು ಸಿವಾಜಿಯು ದೇವರಿಂದ ಆದೇಶ ಪಡೆದು ಬಂದಿದ್ದನೆಂಬುದ ರಲ್ಲೇನೂ ಸಂದೇಹವಿಲ್ಲ.

**ಕರ್ನಲ್ ಟಾಡ್:—** ಹಿಂದೂ ವೀರರಲ್ಲಿ ದೇಶಾಭಿಮಾನವಿಲ್ಲವೆನ್ನು ವವರು ರಜಪುತರು ನಡಿಸಿದ ಧರ್ಮ ಯುದ್ಧದ ಇತಿಹಾಸವನ್ನೋದಲಿ! ಅದನ್ನವರು ಬೇರೆ ದೇಶದ ಇತಿಹಾಸದೊಡನೆ ಹೋಲಿಸಲಿ!

# ೭ ನೆಯ ಪ್ರಕರಣ.

---

## ಶೌರ್ಯ

**ಇಂಥ ಅನ್ಯಾದೃಶ ಶೌರ್ಯ, ಅಪ್ರತಿಮ ದೇಶಭಕ್ತಿ, ನಿರ್ವಂಚನೆಯ ಯುದ್ಧಧರ್ಮಗಳನ್ನು ಕಾಣಬೇಕೆಂದರೆ, ನಮಗೆ ಬೇರೆ ಇನ್ನಾವ ರಾಷ್ಟ್ರದ ಇತಿಹಾಸಗಳಲ್ಲಿಯೂ ಕಾಣಿಸಲಿಕ್ಕಿಲ್ಲ; ಹುಡುಕಿದವರ ಶ್ರಮವು ಮಾತ್ರ ವ್ಯರ್ಥವಾಗುವದು.**

**—ಕರ್ನಲ್ ಟಾಡ್.**

ಆರ್ಯರ ಇತಿಹಾಸ, ಅವರ ಜೀವನ, ಅವರ ನಡೆನುಡಿಗಳನ್ನು ಚನ್ನಾಗಿ ಅಭ್ಯಾಸ ಮಾಡಿದರೆ, ಅವರ ಸ್ವಭಾವದಲ್ಲಿ ನಿಚ್ಚಟದ ಶೌರ್ಯವು ಎಷ್ಟು ಹೆಚ್ಚು ಪ್ರಮಾಣದಿಂದಿರುವದೆಂಬುದು ಮನದಟ್ಟಾಗುತ್ತದೆ. ನಿಜವಾದ ಶೂರನಿಗೆ ಸಲ್ಲುವಂಥ ಪರನಾರಿ ಸೋದರತ್ವ, ನಿಷ್ಕಾರಣವಾಗಿ ಯಾರಿಗೂ ಹಿಂಸಿಸದಿರುವದು, ಶರಣಾಗತ ಶತ್ರುಗಳಿಗೆ ಜೀವದಾನವಿತ್ತು ಔದಾರ್ಯದಿಂದ ನಡೆಯುವದು. ಅವೇ ಮುಂತಾದ ಸದ್ಗುಣಗಳು ಆರ್ಯರಲ್ಲಿ ಸ್ವಾಭಾವಿಕವಾದವುಗಳೇ ಸೈ; ಈ ಗುಣಗಳೊಂದಿಗೆ, ಹಿಂಜರಿಯದ ಧೈರ್ಯ, ಅಲ್ಲಾಡದ ಆತ್ಮವಿಶ್ವಾಸ, ತಿಳಿನೀರಿನಂಥ ಶೀಲ, ಮನುಷ್ಯ ಜಾತಿಯ ಸಾಮಾನ್ಯ ಬುದ್ಧಿಗೆ ನಿಲುಕಲು ಅಸಾಧ್ಯವೂ ಉಚ್ಚವೂ ಆದ ವೇದಾಂತಜ್ಞಾನ, ಅವೇ ಮುಂತಾದ ಒಂದನ್ನೊಂದು ಮೀರಿಸುವ ಉದಾತ್ತ ಗುಣಾಂಶಗಳು ಅವರಲ್ಲಿ ಮನೆ ಮಾಡಿಕೊಂಡಿದ್ದರಿಂದ ಆರ್ಯರು ಎಷ್ಟು ಕರುಣಿಗಳೋ ಅಷ್ಟೇ ವೀರರು, ಎಷ್ಟು ವೀರರೋ ಅಷ್ಟೇ ಕರುಣಿಗಳಾಗಿ ಜಗದೊಳಗೆ ಮೆರೆದರು. ಹೀಗೆ ಶುದ್ಧ ಕ್ಷಾತ್ರವೃತ್ತಿಯಿಂದ ತಮ್ಮ ಆಯುರ್ದಾಯವನ್ನೇ ಪಾವನಗೊಳಿಸಿ, ಇಂದಿಗೂ ಜಗಕ್ಕೆ ಆದರ್ಶಭೂತರಾಗಿರುವವರಲ್ಲಿ ದಧೀಚಿ, ರಾಮ, ಕೃಷ್ಣ, ಅರ್ಜುನ, ಕರ್ಣ, ಭೀಮ, ಬಲಿ, ಬಲಭೀಮ, ಸಗರ ಮುಂತಾದವರು ಮುಖ್ಯರು. ಆರ್ಯವೀರ ಚರಿತ್ರೆಯೆಂದರೆ, ಅದೊಂದು ಮಹಾಸಾಗರವಾಗಿದೆ; ಅದರೊಳಗೆ ಇಂಥ ನರವೀರ ರತ್ನಗಳು ಸಾವಿರಾರು ಇರುವವು. ಇದು ಅತ್ಯಂತ ಪ್ರಾಚೀನ ಕಾಲದ



ರಾಣಾ ಪ್ರತಾಪಸಿಂಗ

ವಾತಾಯಿತು; ಆದರೆ ಐತಿಹಾಸಿಕ ಕಾಲಕ್ಕೆ ನಾವು ಬಂದಿಳಿದರೆ, ಒಂದು ಕಾಲಕ್ಕೆ ಕನ್ನಡಿಗರು, ಆಂಧ್ರರು ಮತ್ತೊಂದು ಕಾಲಕ್ಕೆ ರಜಪೂತರು ಬಂಗಾಲಿಗಳು, ಮಗದೊಂದು ಕಾಲಕ್ಕೆ ಮರಾಟರು ಹೀಗೆ ತಮ್ಮ ತಮ್ಮ ಅನುಕೂಲ ಕಾಲ ಒದಗಿದಾಗ ಒಳ್ಳೇ ಅಟ್ಟಹಾಸದಿಂದ ರಾಜ್ಯವಾಳಿ ಇತಿಹಾಸದೊಳಗೆ ತಮ್ಮ ಹೆಸರುಗಳನ್ನು ಅಮರವಾಗಿ ಮಾಡಿರುವರು; ಇಷ್ಟರೊಳಗೆ ರಜಪುತರ ಇತಿಹಾಸವೇನೋ ಅಪೂರ್ವವೂ, ಸ್ಫೂರ್ತಿಯಲ್ಲಿ ಅಸದೃಶವೂ ಆಗಿದ್ದು, ಭಾರತೀಯ ಇತಿಹಾಸದೊಳಗೆ ನಿಲು-ಗನ್ನಡಿಯಂತೆ ಶೋಭಿಸುತ್ತಿದೆ. ಅಭಿಮಾನಮೂರ್ತಿಯೂ, ತ್ಯಾಗದ ಘಟ್ಟಿಯೂ ಕೆಚ್ಚೆದೆಯ ವೀರನೂ ಆದ ಮೇವಾಡದ ರಾಣಾ ಪ್ರತಾಪಸಿಂಗ, ಉಕ್ಕಿನೆದೆಯ ವೀರನಾದ ಮಾರವಾಡದ ದುರ್ಗಾದಾಸ, ಅಜಮೀರದ ಹಮ್ಮೀರ, ಪೃಥ್ವೀರಾಜ, ಇವರನ್ನು ಸರಿಗಟ್ಟುವ ಅನ್ಯ ವೀರಶಿರೋಮಣಿಗಳಾರಾದರೂ ದೊರೆಯುವರೋ ಹೇಗೆಂಬುದನ್ನು ಹುಡುಕಲು ನಾವು ಜಗತ್ತಿನ ಗತೇತಿಹಾಸವನ್ನು ತಿರುವಿಹಾಕಿದರೂ ನಮಗೆ ನಿರಾಶೆಯಾಗದಿರದು.

ಜಗತ್ತಿನೊಳಗೆಲ್ಲ ಹಿಂದೂಜನಾಂಗವು ಮೀರಿದ ಕಡುಗಲಿಯಾದುದರಿಂದಲೇ ಅದು ಎಲ್ಲಿಯೂ ಕಾಣದಂಥ ವೀರನನ್ನು ತನ್ನಲ್ಲಿ ಹುಟ್ಟಿಸಿ ಜಗತ್ತಿಗೆ ಅರ್ಪಿಸಿತು. ಹರಕ್ಯುಲಸನು ಹೆಚ್ಚಿನ ಕಡುಗಲಿಯೆಂದು ಎಲ್ಲರೂ ಒಪ್ಪುವದುಂಟು; ಆದರೆ ಅವನು ಗ್ರೀಕನಲ್ಲದೆ ಹಿಂದೂ ವೀರನೇ ಸೈ. ಈತನನ್ನೇ ಹಿಂದೂಗಳು ಬಲರಾಮನೆಂದು ಕರೆಯುವರು. ಕರ್ನಲ್ ಟಾಡರು ಹರಕ್ಯುಲಸ ಅಂದರೆ ಹರಿ-ಕುಲ-ಈಶ ಎಂಬುವ ಸಂಸ್ಕೃತ ಪದದ ಕೆಟ್ಟ ರೂಪವೆಂದು ಹೇಳಿರುವರು.

ಹರಕ್ಯುಲಸನು ಹಿಂದೂ ದೇಶದವನೆಂದು **ಡಿಯೋಡರಸನು** ಹೇಳಿರುವನು; **ಕರ್ನಲ್ ಟಾಡ್** ರಂತೂ—"ಭಾರತೀಯ ಮಹಾಯುದ್ಧವು ಮುಗಿದನಂತರ ಪೌರ್ವಾತ್ಯರದೊಂದು ಗುಂಪು ಪಶ್ಚಿಮ ಖಂಡಕ್ಕೆ **ಒಕ್ಕ**ಲಾಗಿರಲಿಕ್ಕೆ ಹೋಗಿರಲಿಕ್ಕೆಬೇಕು; ಕೃಷ್ಣ ಹಾಗೂ ಬಲರಾಮರಿಗೆ ಗ್ರೀಕರು ಅಪೋಲೋ-ಹರ್ಕ್ಯುಲಸ ಎಂದು ಕರೆದಿರಬಹುದು. ಇಷ್ಟೇ ಅಲ್ಲದೆ ಹಿಂದೂದೇಶದ ಹರ್ಕ್ಯುಲಸನಿಗೂ ಗ್ರೀಸದ ಹಿರಾಕ್ಲೀಡನಿಗೂ ಸಂಬಂಧವಿತ್ತೆಂದು ಹೇಳಲಿಕ್ಕೇನೂ ಅಡ್ಡಿಯಿಲ್ಲ." ಎಂದು ನುಡಿದಿರು

ವರು. ಹಿಂದೂ ಮತ್ತು ಗ್ರೀಕರಿಗೆ ಸಾಕಷ್ಟು ಸಂಬಂಧವಿರುವ ಆಧಾರ ಗಳು ದೊರೆಯುವವು; ಅವು ಕೆಳಗೆ ಕಾಣಿಸಿದಂತಿವೆ—

(೧) ಗ್ರೀಕರ ಹಿರಾಕ್ಲೀಡನು ತನ್ನ ವಂಶವು ಸೂರ್ಯ ಚಂದ್ರರಷ್ಟು ಪ್ರಾಚೀನವಿರುವದೆಂದು ಹೇಳಿರುವನು.

(೨) ತನ್ನ ವಂಶದ ಮೂಲಪುರುಷನು ಅತ್ರೆಯನೆಂದೂ ಹಿರಾಕ್ಲೀಡನು ಅತ್ರಿ ಎಂದೂ ಹರ್ಕ್ಯುಲಸನು ಹೇಳಿರುವನು.

(೩) ತಾವು **ಯುವನ** ವಂಶಜರೆಂದು ಗ್ರೀಕರು ಹೇಳುವದು; ಹರಿ-ಕುಲ-ಈಶರು ತಾವು **ಯಯಾತಿಯ** ವಂಶದವರೆಂದುಕೊಳ್ಳುವರು.

(೪) ಸಿಕಂದರನು ಪಾಂಚಾಲದೇಶದ ಪಟ್ಟಣಗಳಿಗೆ ದಂಡಿನೊಡನೆ ಸಾಗಿ ಹೋದಾಗ ಅಲ್ಲಿಯ ಅರಸನಾದ ಪೋರಸನು ತನ್ನಲ್ಲಿ ಹರ್ಕ್ಯುಲಸನ ಧ್ವಜವಿದ್ದ ಸಂಗತಿಯನ್ನು ಹೇಳಿ ತನಗೂ ಅವನಿಗೂ ಪೂರ್ವ ಸಂಬಂಧ ವಿದ್ದ ಗುರುತನ್ನು ತೋರಿಸಿದನು.

ಒಟ್ಟು, ಗ್ರೀಕರ ಮತ್ತು ಹಿಂದೂಜನರ ಮೂಲವು ಒಂದೇ ಇತ್ತೆಂದು ಇಬ್ಬರ ಪುರಾಣಗಳನ್ನೋದಿದರೆ ಸ್ಪಷ್ಟವಾಗುವದು. "ಗ್ರೀಕರಿಗೆ ಇಜಿಪ್ತ ಹಾಗೂ ಪೂರ್ವ ದೇಶವೇ ಮೂಲ" ವೆಂದು ಪ್ಲೇಟೋನ ಮತವಿದೆ.

**ಕರ್ನಲ್ ಟಾಡ್:**— ಇವರು ರಾಜಸ್ಥಾನದ ಇತಿಹಾಸವನ್ನು ಬರೆದಿದ್ದು ರಜಪುತರ ವೀರ್ಯ—ವರ್ಣನೆಗಳನ್ನು ಹೊಗಳಲು ಬಾಯಿ ಸಾಲದೆ, ಶಬ್ದಗಾಣದೆ, ಹೋದರು; ಒಂದೆಡೆಯಲ್ಲಿ ಅವರನ್ನುವದು—"ಇಂಗ್ಲಂಡದ ಅರಸನ (*Courdelion*) ಪಾಲಿಗೆ ರಜಪುತರು ಪ್ರಜೆಗಳಿದ್ದರೆ, ಅವನು ಅಷ್ಟೊಂದುದಿನ ಆಸ್ಟ್ರಿಯದ ಸೆರೆಮನೆಯಲ್ಲಿ ಕೊಳೆಯುತ್ತ ಬೀಳುತ್ತಿರಲಿಲ್ಲ."

ಹಿಂದೂ ಜನರ ಯುದ್ಧ ಪದ್ಧತಿಯನ್ನು ಕುರಿತು—

**ಪ್ರೊ. ವಿಲ್ಸನ್ನರು:**— ಹಿಂದೂಗಳ ಕಟ್ಟಳೆಗಳು ವೀರರಿಗೆ ಉಚಿತವಾದವು; ಇಷ್ಟಿದ್ದರೂ ಆ ಶೂರತನದಲ್ಲಿ ದಯಾದೃಷ್ಟಿಯು ಹೊರಸೂಸುತ್ತಿದೆ. ಬಿದ್ದವರನ್ನು ಹಿಂಸಿಸುವದು, ಅವರ ಗೋಳು ಕಣ್ಣಿನಿಂದ ನೋಡಿ ಸಂತೋಷಪಡುವದು, ಅವರ ಹೆಂಡತಿ—ಮಕ್ಕಳನ್ನು ಗೋಳಾಡಿಸುವದು, ಶರಣುಬಂದವರನ್ನು ಕೊಲ್ಲುವದು ಇಂಥ ಅಕಾರ್ಯಗಳು ಅವರಿಗೆ ಕೇಳಿ ಕೂಡ ಗೊತ್ತಿಲ್ಲ; ಕಟ್ಟಳೆಗಳು ಇಂಥ ಅಕಾರ್ಯಗಳನ್ನು ನಿಷೇಧಿಸುವವು."

ರಜಪುತರ ಯುದ್ಧದ ಪದ್ಧತಿಯು ಬರಿಯ ಸೋಲು-ಗೆಲವುಗಳಿಗಾಗಿ ಇರದೆ, ಯಶಕ್ಕಾಗಿ ಇದ್ದಿತು; ಯುದ್ಧ ಮಾಡುವದೆಂದರೆ, ಅವರಿಗೆ ಅದೊಂದು ಚದರಂಗದ ಆಟ; ಮಡಿಯುವದೆಂದರೆ ಅದೊಂದು ಭಾಗ್ಯ; ಚಿತ್ತೂರಿನ ರಾಯಮಲ್ಲನ ಆಳಿಕೆಯಲ್ಲಿ, ಆತನ ಅಣ್ಣನ ಮಗನಾದ ಸುರಜಮಲ್ಲನು ರಾಯಮಲ್ಲನ ವಶದಲ್ಲಿದ್ದ ಕೆಲ ಕೋಟೆಗಳನ್ನು ಗೆಲಿಯಲು ಪ್ರಯತ್ನಿಸಿದನು. ಅದರಂತೆ, ನಸೀರುದ್ದೀನ ಖಿಲಜಿಯ ನೆರವಿನಿಂದ ಅವನು ಒಂದೆರಡನ್ನು ಗೆದ್ದುಕೊಂಡನು. ಆದರೆ ಈ ಕಾಳಗದೊಳಗೆ ರಾಯಮಲ್ಲನ ಮಗನಾದ ರಾಣಾಕುಮಾರ ಪೃಥ್ವೀರಾಜನಿಗೂ ಸುರಜಮಲ್ಲನಿಗೂ ಕೈ ಕೈ ಹತ್ತಿ ಅದರೊಳಗೆ ಸುರಜಮಲ್ಲನು ಗಾಯಗೊಂಡನು; ಆ ದಿನದ ಯುದ್ಧ ಮುಗಿದ ಮೇಲೆ ಪೃಥ್ವೀರಾಜನು ತನ್ನ ಕಕ್ಕನಾದ ಸುರಜಮಲ್ಲನನ್ನು ಕಾಣಲಿಕ್ಕೆಂದು ಅವನ ರಾವುಟಿಗೆ ಹೋದಾಗ, ಸುರಜಮಲ್ಲನು ಕೆಲಸಿಗನಿಂದ ಗಾಯಗಳನ್ನು ಸರಿಪಡಿಸಿಕೊಳ್ಳುತ್ತಿದ್ದನು. ಹೀಗಿದ್ದರೂ ತನ್ನ ಭೆಟ್ಟಿಗಾಗಿ ಅಣ್ಣನ ಮಗನು ಬಂದೊಡನೆ ಅವನಿಗೆ ಅಲಾಬಲಾಕೊಟ್ಟು ತಕ್ಕೈಸಿ, ಕುಳ್ಳಿರಿಸಿಕೊಂಡನು; ತರುವಾಯ ಕಕ್ಕ-ಮಗನಲ್ಲಿ ಕೆಳಗಿನಂತೆ ಮಾತು ನಡೆಯಿತು.

**ಪೃಥ್ವೀರಾಜ:—** ಒಳ್ಳೇದು, ಕಕ್ಕನವರೇ? ಈಗ ನಿಮ್ಮ ಗಾಯಗಳು ಹೇಗಿವೆ ?

**ಸುರಜಮಲ್ಲ:—** ಮಗುವೇ? ನಿನ್ನ ನೋಡಿದಾಕ್ಷಣವೇ ಅವೆಲ್ಲ ಮಾಯ್ದವು!

**ಪೃಥ್ವೀರಾಜ:** — " ಆದರೆ, ಕಕ್ಕಾ? ದಿವಾಣರೆಲ್ಲಿ? (ರಾಣಾರಾಯಮಲ್ಲನು) ನನಗೆ ಏಕೋ ಬಹು ಹಸಿವೆಯಾದ್ದರಿಂದ ಮೊದಲು ಇತ್ತ ಕಡೆಗೇ ಓಡಿ ಬಂದೆ. ತಿನ್ನಲಿಕ್ಕೇನಾದರೂ ಇದೆಯೇ ?

ಆಗ ಅವರಿಬ್ಬರೂ ಕುಳಿತುಕೊಂಡು ಊಟಮಾಡಿದರು. ತರುವಾಯ ಎಲೆ ಅಡಿಕೆ ಹಾಕಿಕೊಂಡು " ನಾಳೆ ಬೆಳಿಗ್ಗೆ ನಮ್ಮ ಇಬ್ಬರ ಯುದ್ಧವನ್ನು ಮುಗಿಸುವಾ ,, ಎಂದು ನಸುನಗೆಯಿಂದ ಮಾತನಾಡಿ ಪೃಥ್ವೀರಾಜನು ನಮಸ್ಕರಿಸಿ ಹೊರಟನು. ಸುರಜಮಲ್ಲನಾದರೂ ಅವನ ಮಾತಿಗೆ " ಆಗಲಿ, ಮಗು, ಬೇಗನೇ ಬಾ" ಎಂದನು.

ಮರುದಿನ ಉಭಯತರಿಗೂ ಯುದ್ಧ ಪ್ರಾರಂಭವಾಯಿತು. ಈ ಲಗ್ಗೆಯಲ್ಲಿ ಸುರಜಮಲ್ಲನಿಗೆ ಬಲವಾದ ಘಾಯವಾಯಿತು. ಆಗ ಅವನು ಯುದ್ಧ ನಿಲ್ಲಿಸಲಿಕ್ಕೆ ಹೇಳಿ “ನಾವು ಒಂದು ವೇಳೆ ಸತ್ತರೆ, ನನ್ನ ದೇಶ ರಕ್ಷಿಸಲು ನನ್ನ ಮಕ್ಕಳಿರುವರು; ಆದರೆ ಪೃಥ್ವೀರಾಜನೇ? ನೀನು ಮಾತ್ರ ಮಡಿದರೆ, ಮುಂದೆ ಚಿತ್ತೂರಿನ ಗತಿಯೇನು! ನನ್ನ ಮುಖಕ್ಕೆ ಕಪ್ಪು ಹತ್ತಿ ನನ್ನ ಹೆಸರಿಗೆ ಅಳಿಸಲು ಬಾರದ ಕಲಂಕ ತಟ್ಟುವದು; ಮಾತ್ರ!” ಹೀಗೆ ಅಂದೊಡನೆ ಇಬ್ಬರೂ ತಮ್ಮ ತಮ್ಮ ಕತ್ತಿಗಳನ್ನು ಒರೆಗಾಣಿಸಿ, ಒಬ್ಬರ ನ್ನೊಬ್ಬರು ಅಪ್ಪಿಕೊಂಡರು.

ತಲೆಬೀಳುವವರೆಗೂ ರಣಾಂಗಣದಲ್ಲಿ ಶತ್ರುಗಳೊಡನೆ ಈರ್ಸೆಯಿಂದ ಕಾದುವಂಥ ರಜಪೂತರ ಅಲೌಕಿಕವಾದ ಇಂಥ ಮಾದರಿಯು ಬೇರೆ ಯಾವ ದೇಶದ ಇತಿಹಾಸವನ್ನಾದರೂ ಒಳಹೊಕ್ಕು ಕದಡಿದರೂ ಸಿಗಲಿಕ್ಕೆ ಸಾಧ್ಯವೇ? ಅಂದ ಮೇಲೆ ರಜಪೂತರ ರಕ್ತವೆಂಬುದೇನೋ ಒಂದು ದೈವಿಕ ಶಕ್ತಿಯುತ್ತೆನ್ನಲಿಕ್ಕೇನು ಅಡ್ಡಿ?

**ಕರ್ನಲ್ ಟಾಡ್:**— ನಿಮುಜ ಎಂಬ ಚಿಕ್ಕ ಸಂಸ್ಥಾನದ ರಜಪೂತ ಅರಸನನ್ನು ಕುರಿತು ಮೇಲಿನ ಗ್ರಂಥಕಾರನು “ರಜಪೂತರ ಶೌರ್ಯ, ವೀರ್ಯ, ಔದಾರ್ಯ, ಮುಂತಾದ ಮೇಲಾದ ಗುಣಗಳು ನಮಗೆ ಯುರೋಪದ ಇತಿಹಾಸದಲ್ಲೆಂದಾದರೂ ಸಿಗುವವೇ? ಇಲ್ಲ; ಇಂಥವು ಗಳನ್ನು ಹುಡುಕುವದೆಂದರೆ ದಡ್ಡತನವೇ ಸರಿ!” ಎಂದು ಅಂದಿರುವರು.

**ಮಿ. ಎಲ್‌ಫಿನ್‌ಸ್ಟನ್:**—“ರಜಪೂತರಿಗೆ ಮಾನ, ಹಾಗೂ ಧರ್ಮ ಗಳ ಮುಂದೆ ಜೀವದ ಮಹತ್ವವೇ ಅನಿಸುವದಿಲ್ಲ.”

**ಮಿ. ಬೇಲಿಫ್ರೆಜರ:**— “ಅಲ್ಲಾಡದ ದೇಶನಿಷ್ಠೆ, ಮರಣಕ್ಕಂಜದ ಶೌರ್ಯ, ಎಚ್ಚರವಿಲ್ಲದೆ ಕಾದುವಿಕೆ, ಈ ಗುಣಗಳು ನಮಗೆ ರಜಪೂತರಲ್ಲ ಲ್ಲದೆ ಇನ್ನಾರಲ್ಲಿಯೂ ದೊರೆಯಲಾರವು.” ಶರಣಾಗತ ಶತ್ರುವಿಗೆ ಜೀವ ದಾನ ಕೊಡುವದೊಂದು ತಮ್ಮ ಮುಖ್ಯ ಧರ್ಮವೆಂದೇ ಅವರ ಭಾವನೆ; ಅದು ರಜಪೂತರ ಆಯುಷ್ಯದ ಪಲ್ಲವಿ.”

ಹೀಗೆ ರಜಪೂತರು ಸಾವಿಗಂಜದ ಶೂರರೂ, ಸತ್ಯನಿಷ್ಠರೂ, ಅಸಮೋಸ ನ್ನರಿಯದ ಶೂರರೂ ಇದ್ದುದರಿಂದ, ಕೇವಲ ಮೋಸಗಾರರಾದ ಶತ್ರುಗಳ

ಮುಂದೆ ಅವರು ಸೋಲಬೇಕಾಯಿತು; ಅವರಲ್ಲಿರುವ ಶುದ್ಧ ದೈವಿಕ ಕ್ಷಾತ್ರ ಗುಣಗಳೊಂದಿಗೆ ವ್ಯವಹಾರಕ್ಕನುಗುಣವಾದ ರಾಜಕೀಯ ಗುಣ–ವಿವೇಕವೊಂದು ಕೂಡಿದ್ದರೆ, ಹಿಂದುಸ್ಥಾನವು ಸೋತು ಹಿಂದೆ ಬೀಳುವ ಹೊತ್ತು ಬರುತ್ತಿರಲಿಲ್ಲ. ಆರನೇ ಶತಮಾನದಲ್ಲಿ ಹಿಂದುಸ್ಥಾನಕ್ಕೆ ದಂಡೆತ್ತಿ ಬಂದ ಮಿಹಿರಕುಲನೆಂಬ ಹೂಣ ದಾಳಿಗಾರನು ಪಂಜಾಬಕ್ಕೆ ಬಂದು ಮೀರಿದ ಹಾವಳಿನಡಿಸಲು, ತತ್ಕಾಲೀನ ಮಗಧ ರಾಜನಾದ ಬಾಲಾದಿತ್ಯನು ಅವನನ್ನು ಸೋಲಿಸಿ, ಜೀವದಾನಕೊಟ್ಟು ಕಳಿಸಿದನು. ಶಹಾಬುದ್ದೀನ ಘೋರಿಯು ತಿಲಾವೋರಿ ರಣಾಂಗಣದಲ್ಲಿ ಪೃಥ್ವೀ ರಾಜನಿಗೆ ಸೋತರೂ, ಆತನಿಗೆ ಜೀವದಾನ ಕೊಟ್ಟು ಸ್ವದೇಶಕ್ಕೆ ಹೋಗಲು ಅಪ್ಪಣೆಯಿತ್ತನು; ಆದರೆ ಹಾವಿನ ಜಾತಿಯು ಘೋರಿಗೆ, ತನ್ನ ಶತ್ರುವಿನ ಗುಣದ ಬೆಲೆ ಅದೆಂತು ತಿಳಿಯುವದು ? ಅವನು ಅದೇ ಹಿಂಗಿಟ್ಟುಕೊಂಡು ಹೊಸ ಸೈನ್ಯ ಶೇಖರಿಸಿಕೊಂಡು ದೇಶದ್ರೋಹಿಗಳಾದ ಕನೋಜ–ಪಾಟನದ ರಾಜರನ್ನೂ ಹವಣಿರಾವ ಹಮೀರನನ್ನೂ ಕೂಡಿಕೊಂಡು ಹಿಂದೂ ಸಿಂಹಾಸನವನ್ನೇ ಹಾರಹೊಡೆದನು; ಅದೇ ಮೇರೆಗೆ, ಮಾಳವೆಯ ಗಿಲಝಿ ಅರಸನಾದ ಮಹಮ್ಮದನನ್ನು ಚಿತ್ತೂರಿನ ಮಹಾರಾಣಾಸಂಗನು ೧೫೨೦ ಇಸ್ವಿಯಲ್ಲಿ ಸೋಲಿಸಿ ಸೆರೆಹಿಡಿದಿದ್ದರೂ, ಮತ್ತೆ ದಯದಿಂದ ಮನಕರಗಿದವನಾದ ಸಂಗನು ಅವನನ್ನು ಬಿಟ್ಟು, ಆತನಿಗೆ ಬೆಲೆಯುಳ್ಳ ಕಾಣಿಕೆಗಳನ್ನಿತ್ತು, ಮಾಳವೆಯ ಸಿಂಹಾಸನದ ಮೇಲೆ ತಿರಿಗಿ ಕುಳ್ಳಿರಿಸಿದನು; ಆದರೆ ಕೃತಘ್ನನೂ, ಉಪ್ಪುಂಡವರ ಮನೆ ಸದೆಯುವ ಪಾಪಿಯೂ ಆದ ಮಹಮ್ಮದನೇ, ಸಂಗನು ತೀರಿಕೊಂಡನಂತರ, ಚಿತ್ತೂರನ್ನು ಮುತ್ತಲಿಕ್ಕೆಂದು ದಂಡು ಕಳುಹಿದನು! ಔರಂಗಜೇಬನು ತನ್ನ ಬಲವುಳ್ಳ ಸೇನೆಯೊಂದಿಗೆ ಮೇವಾಡವನ್ನು ಮುತ್ತಿರಲು, ಆ ಮುತ್ತಿಗೆಯಲ್ಲಿಯ ಅಸಂಖ್ಯ ಸೈನಿಕರು ಅನ್ನ–ನೀರಿಲ್ಲದೆ ಪೇಚಾಡುತ್ತಿರಲು, ತಮ್ಮ ಹಿತವನ್ನೂ, ಪರರ ಕುತಂತ್ರವನ್ನೂ ಅರಿಯದ ಉದಾರರಾದ ರಜಪುತರು ದಯಾ–ದಾಕ್ಷಿಣ್ಯಗಳಿಗೆ ಬಲಿಬಿದ್ದು, ಅವರೆಲ್ಲರ ಜೀವ ಉಳಿಸಿದರು ! ಅಷ್ಟೇ ಅಲ್ಲದೆ ಔರಂಗಜೇಬನು ರಜಪುತರ ದಯದಿಂದಲೇ ಜೀವಂತನಿದ್ದನೆಂದು ಆರ್ಮ್ ಎಂಬ ಇತಿಹಾಸಗಾರನು ಒಂದೆಡೆಯಲ್ಲಿ ಬರೆದಿರುವನು; ಒಂದಲ್ಲ ಎರಡಲ್ಲ ಹಲವು ಪ್ರಸಂಗಗಳಲ್ಲಿ ರಜಪುತರು ಸೆರೆಸಿಕ್ಕ

ಮುಸಲ್ಮಾನ ಹೆಂಗಸರನ್ನೂ, ಔರಂಗಜೇಬನ ಹೆಂಡತಿಯನ್ನೂ ಒಳ್ಳೇ ಮರ್ಯಾದೆಯಿಂದ ನಡಿಸಿಕೊಂಡು, ಅವರನ್ನು ಕಾವಲ ಸಹಿತವಾಗಿ ಔರಂಗಜೇಬನ ವಶಕ್ಕೆ ತಿರಿಗಿ ಕಳಿಸಿದ ಅತ್ಯಂತ ಮೇಲ್ತರಗತಿಯ ದೃಷ್ಟಾಂತಗಳು ಇಡೀ ಮಾನವ ಜಾತಿಗೆ ಮೇಲುಪಂಕ್ತಿಯಾಗಿ ಇತಿಹಾಸದೊಳಗೆ ಮೆರೆಯುತ್ತಿವೆ; ಆದರೆ ' ಹಾವಿಗೆ ಹಾಲೆರೆದೇನು ಫಲ ' ಎಂಬುವಂತೆ, ರಜಪುತರ ಈ ಧಾರ್ಮಿಕ-ದಯೆಯ ಭಾವನೆಯೇ ಅವರ ಅಳಿಗಾಲಕ್ಕೆ ಮುಳವಾಯಿತು; ಅವರಲ್ಲಿ ವ್ಯವಹಾರಿಕ ರಾಜಕಾರ್ಯಕೌಶಲ್ಯವಿದ್ದರೆ, ದಿಲ್ಲಿಯ ಮುಸಲ್ಮಾನರ ಪಟ್ಟವು ಎಂದೋ ನಾಶವಾಗಿ ಹೋಗುತ್ತಿತ್ತೆಂದು ಕರ್ನಲ್ ಟಾಡ್‌ರು ಸಾರಿರುವರು. ಅಕಬರ ಹಾಗೂ ಜಹಾಂಗೀರನ ಆಳಿಕೆಯಲ್ಲಿ ಕಳಕೊಂಡ ತಮ್ಮ ರಾಜ್ಯವನ್ನು ಗಳಿಸುವ ಭಂಗಾರದಂಥ ಸಂಧಿಗಳು ಹಿಂದೂಜನರಿಗೆ ಬಂದಿರಲು, ಮನೆಯವರೆಗೆ ನಡೆಯುತ್ತ ಬಂದ ಭಾಗ್ಯಲಕ್ಷ್ಮಿಯನ್ನು ಮೇವಾಡದ ರಾಣರು ಕೇವಲ ರಾಜಕೀಯ ವಿವೇಕವಿಲ್ಲದ್ದರಿಂದಲೇ ಕಳೆದುಕೊಂಡರು.

ತಾವು ನೋಡಿದ ಜನಾಂಗದವರಲ್ಲೆಲ್ಲ ಹಿಂದೂಜನರೇ ಅತ್ಯಂತ ಶೂರರೆಂದು ಗ್ರೀಕರು ಮನವಾರೆ ಹೊಗಳಿದ್ದಾರೆ. ಸೋಲಿನ ಸೊಲ್ಲನ್ನರಿಯದ ಸಿಕಂದರಬಾದಶಹನ ವಿಜಯಶಾಲಿಯಾದ ಸೈನ್ಯದವರನ್ನು ಮಗದಾಧಿಪನು ತನ್ನ ಭೀಮಪರಾಕ್ರಮದಿಂದ ನಡುಗಿಸಿದನು. ಅಕಬರನ ಮಂತ್ರಿಯಾದ ಅಬುಲ್‌ಫಜಲನು ಹಿಂದೂಗಳ ಶೌರ್ಯ-ಔದಾರ್ಯಗಳನ್ನು ಕುರಿತು ಬಣ್ಣಿಸುವಾಗ " ಕಷ್ಟಕಾಲದಲ್ಲಿಯೇ ಹಿಂದೂಗಳ ಸ್ವಭಾವವು ಪುಟಕ್ಕಿಟ್ಟ ಚಿನ್ನದಂತೆ ಹೊಳೆಯುವದು; ರಣಾಂಗಣಕ್ಕೆ ಬೆನ್ನು ತೋರಿಸುವದೆಂದರೆ ಏನೆಂದು ಅವರು ಕೇಳುವರು; ಆದರೆ, ಜಯ ಸಿಗುವದು ಸಂಶಯದ ಮಾತೆಂದೆನಿಸಿದಾಗ, ಅವರು ತಮ್ಮ ಕುದುರೆಯನ್ನಿಳಿದು, ನಿಚ್ಚಟದಿಂದ ಕಾದಿ, ತಮ್ಮಲ್ಲಿರುವ ಶೌರ್ಯ-ಸಾಹಸಗಳೆಲ್ಲವನ್ನೂ ರಣದೇವತೆಗೆ ಇಳಿದೆಗೆದು, ಅಲ್ಲಿಯೇ ದೇಹವಿಡುವರು."

ಬುಂದಿಯ ರಾವ್‌ಸುಜೂನಿಗೂ, ಚಿತ್ತೂರಿನ ರಾಣಾರತ್ನನಿಗೂ ಒಂದು ಕಾರಣದಿಂದ ಯುದ್ಧ ನಡೆದಾಗ ರಾವನು ಗುಂಡು ತಗಲಿ ನೆಲಕ್ಕೆ ಬಿದ್ದರೂ, ತನ್ನ ಕುಲದ ಕೀರ್ತಿಯನ್ನು ನೆನಪಿಗೆ ತಂದುಕೊಂಡು, ತತ್

ಕ್ಷಣವೇ ಎದ್ದು, ಗುಂಡು ತಗಲಿ ನೆತ್ತರ ಸೋರುತ್ತಿದ್ದ ಗಾಯವನ್ನು ತನ್ನ ಶಾಲಿನಿಂದ ಬಿಗಿದು ಯುದ್ಧಕ್ಕೆ ಸನ್ನದ್ಧನಾದನು; ಕೆರಳಿದ ಹುಲಿಯಂತೆ ರಾವನು ರಾಣಾನ ಮೇಲೆ ಸಾಗಿದರೂ, ರಾಣಾನು ಅವನೊಡನೆ ಇದ್ದ ಮತ್ತೊಬ್ಬನು ಹೀಗೆ ಇಬ್ಬರೂ ಒಂಟಿಗನಾದ ಅವನನ್ನು ಹಿಡಿದು ಕೊಂದರು; ಒಬ್ಬೊಂಟಿಗನಾದರೂ ತಾನು ತನ್ನ ಶಕ್ತಿಮೀರಿ ಶತ್ರುವಿಗೆ ಟಂಕು ತಿನಿಸಿದೆನೆಂಬ ಸಮಾಧಾನದಿಂದ ರಾವನು ರಣದಲ್ಲಿ ಪ್ರಾಣ ಬಿಟ್ಟನು. ಈ ಸುದ್ದಿಯು ಬುಂದಿಗೆ ಹೋಗಿ ಮುಟ್ಟಿದೊಡನೆ, "ನನ್ನ ಮಗನೊಬ್ಬನೇ ಇಬ್ಬರೊಡನೆ ಹೋರಾಡುತ್ತ ರಣದಲ್ಲಿಮಲಗಿದನೇ! ಸರಿ. ಈ ಮೊಲೆಯ ಹಾಲನ್ನುಂಡ ಆತನ ಜೀವವು ಅದೆಂದೂ ಸಂಗಡಿಗರಿಲ್ಲದೆ ಹೋಗದು." ಎಂದು ನುಡಿದೊಡನೆ ಕಾರಂಜಿಯಂತೆ ಆ ತಾಯಿ ಮೊಲೆಯಿಂದ ಹಾಲು ಒಂದು ಕಲ್ಲಿಗೆ ಚಿಮ್ಮಿದೊಡನೆ ಕೆಳಗಿದ್ದ ಆ ಕಲ್ಲು ಕೂಡ ಎರಡು ಹೋಳಾಯಿತಂತೆ! ಮಾರವಾಡದ ರಾಠೋರ ಮನೆತನದವರದೊಂದು ಮೀರಿದ ಕಥೆ ಕೇಳಿರಿ! ಮುಕುಂದದಾಸನು ಬಹು ಸ್ವಾಭಿಮಾನಿಯಿದ್ದುದರಿಂದ, ಔರಂಗಜೇಬನಂಥವನಿಗೆ ಒಂದಾನೊಂದು ಪ್ರಸಂಗದಲ್ಲಿ ಬಹು ನಿಷ್ಠುರವಾಗಿ ಮಾತನಾಡಿದನು. ಅವಮಾನಕರವಾದ ಈ ಶಬ್ದಗಳಿಂದ ಕೆರಳಿದವನಾಗಿ ಅವನನ್ನು ಹುಲಿಯ ಗವಿಯಲ್ಲಿ ನೂಗಿಸಬೇಕೆಂದು ಶಿಕ್ಷೆ ವಿಧಿಸಿದನು. ಅವನಾಜ್ಞೆಯಂತೆ ಅವನನ್ನು ಹುಲಿಯ ಗವಿಯಲ್ಲಿ ಹಾಕಿದರು; ಇವನು ಒಳಗೆ ಕಾಲಿಟ್ಟೊಡನೆ, ಹುಲಿಯು ಒಳ್ಳೇ ಅಬ್ಬರದಿಂದ ಬರಹತ್ತಿದಾಕ್ಷಣವೇ ಅದನ್ನು ಕುರಿತು ಮುಕುಂದದಾಸನು "ಹುಲಿಯಪ್ಪಾ! ರಜಪೂತರ ಈ ಹುಲಿಯ ಮುಂದೆ ಬಂದರೆ ಬಾ" ಎಂದು ಕೂಗಿ ನಮಸ್ಕಾರ ಮಾಡಿದೊಡನೆ, ಆ ಹುಲಿಯಪ್ಪನು ಅವನ ಮುಖವನ್ನು ತುಸು ಹೊತ್ತು ಮಿಕಿ ಮಿಕಿ ನೋಡಿ ತಲೆ ಕೆಳಗೆ ಹಾಕಿ, ಸುತ್ತು ತಿರುಗಿ, ಒಳ್ಳೇ ಗರುವಾಯಿಯಿಂದ ಹಿನ್ನಡೆದನು. ಆಗ ರಾಠೋರನು "ನೋಡಿದಿರಾ! ನನ್ನನ್ನೆದುರಿಸುವ ಧೈರ್ಯವು ಅದಕ್ಕಾಗಲೊಲ್ಲದು; ಅಂಥ ಮೇಲೆ, ಎದುರಿಸದ ವೈರಿಯ ಮೇಲೆ ಸಾಗಿ ಹೋಗುವದು ರಜಪೂತರ ಧರ್ಮವಲ್ಲ." ವೆಂದು ಸುಮ್ಮನಿದ್ದನು. ಇದನ್ನೆಲ್ಲ ಕಣ್ಮುಟ್ಟ ನೋಡಿದ ಔರಂಗಜೇಬನಿಗೆ ಬಹು ಸೋಜಿಗವೆನಿಸಿ, ಅವನಿಗೆ ಕಾಣಿಕೆ

ಗಳಲ್ಲದೆ ನರಹರಖಾನ ಎಂಬ ಬಿರುದನ್ನೂ ಕೊಟ್ಟು ಕಳಿಸಿದನು.

ಇಂಥ ಕೆಚ್ಚೆದೆಯ ೧ ಲಕ್ಷ ರಜಪುತ ಬಂಟರು ಮೊಗಲರ ಕಡೆಗೆ ಇದ್ದುದರಿಂದಲೇ ಮೊಗಲರ ರಾಜ್ಯವು ಇಷ್ಟೊಂದು ಘನತೆಗೇರಿತು; ಆದರೆ ಮೊಗಲರಲ್ಲಿದ್ದ ಸ್ವಧರ್ಮದ ಹಟ ಮತ್ತು ಸಾಮ್ರಾಜ್ಯಮದ ಇವೆರಡೂ ಬರಬರುತ್ತ ತಾಳಗೆಟ್ಟದ್ದರಿಂದ ರಜಪುತರಿಗೆ ಅವರ ಬಗ್ಗೆ ತಲೆ ಚಿಟ್ಟಿಡಿದು, ಸಾಮ್ರಾಜ್ಯಕ್ಕೆ ಆಧಾರಸ್ತಂಭರಾದವರೇ ಅವರ ವಿಷಯದಲ್ಲಿ ಪೂರ್ಣ ನಿರಾಶರಾದ್ದರಿಂದ ಇನ್ನೂ ನಾಲ್ಕು ಕಾಲ ಬಾಳುವಂತಿದ್ದ ಮೊಗಲ ಸಾಮ್ರಾಜ್ಯವು ನೋಡ ನೋಡುತ್ತಿರುವಾಗಲೇ ನೆಲಕ್ಕುರುಳಿತು. ತಮಗೆ ಮೀರಿದ ಶತ್ರುಗಳಿಗೆ ವಿಷ ಹಾಕಿಸುವದೊಂದು ಹಂಚಿಕೆಯನ್ನು ಮೊಗಲರು ಕಂಡು ಹಿಡಿದಿದ್ದರು. ಇದರಿಂದಲೇ ಅವರು ಜೋಧಪುರದ ಯಶವಂತಸಿಂಗನನ್ನೂ, ಜಯಪುರದ ಜಯಸಿಂಗನನ್ನೂ, ಕೊಲ್ಲಿಸಿದರು.

ಔರಂಗಜೇಬನ ಓಲಗದಲ್ಲಿದ್ದ **ಕಾಫೀಖಾನ** ಎಂಬ ಚರಿತ್ರಗಾರನು ಶಿವಾಜಿ ಹಾಗೂ ಆತನ ದಂಡಿನವರಬಗ್ಗೆ ಬರೆಯುವದು:— ಮರಾಠೀಜನರು ಸುಲಿಗೆಗಾಗಿ ಹೋದಲ್ಲೆಲ್ಲ ಮಸೀದೆಗಳಿಗೂ ಕುರಾಣಕ್ಕೂ, ಹೆಂಗಸರಿಗೂ ಕೈಹಚ್ಚಲಾಗದೆಂದು ಶಿವಾಜಿಯ ಕಟ್ಟಪ್ಪಣೆ ಇತ್ತು; ಅಪ್ಪಿತಪ್ಪಿ ಶಿವಾಜಿಯ ಕೈಗೆ ಮುಸಲ್ಮಾನರ ಧರ್ಮಶಾಸ್ತ್ರವಾದ ಕುರಾಣವು ದೊರೆತರೆ, ಅವನು ಅದನ್ನು ತಲೆಯಮೇಲಿಟ್ಟುಕೊಂಡು ನಮಸ್ಕರಿಸಿ ತನ್ನ ಕೈ ಕೆಳಗಿರುವ ಮುಸಲ್ಮಾನರಿಗೆ ಕಾಣಿಕೆಯೆಂದು ಕೊಡುತ್ತಿದ್ದನು; ಶತ್ರುಪಕ್ಷದ ಹಿಂದೂ ಅಥವಾ ಮುಸಲ್ಮಾನರ ಹೆಂಗಸರು ತನ್ನ ದಂಡಿನವರಿಗೆ ಕೈಸೆರೆ ಸಿಕ್ಕರೆ ಅವರನ್ನು ತಾಯಿ ಅಕ್ಕತಂಗಿಯರಂತೆ ಕಾಪಾಡುತ್ತಿದ್ದನು.

**ಎಚ್, ಜಿ, ರಾಲಿನ್ಸನ್ನರು ಶಿವಾಜಿಯ ಬಗ್ಗೆ ಆತನ ಚರಿತ್ರೆಯಲ್ಲಿ ಬರೆಯುವದು:—** ಶಿವಾಜಿಯು ಶೂರನೂ ವೀರನೂ ಇದ್ದನು; ಆತನಿಂದೆಂದೂ ಬುದ್ಧಿಪೂರ್ವಕ ಕ್ರೂರ ಕೆಲಸಗಳಾಗಲಿಲ್ಲ. ಸೆರೆಯಲ್ಲಿ ಸಿಕ್ಕ ಶತ್ರುಪಕ್ಷದ ದಂಡಿನವರನ್ನು ಬಿಡುವದು, ಹೆಂಗಸರನ್ನು ತಾಯಿ-ಅಕ್ಕ ತಂಗಿಯಂತೆ ಮನ್ನಿಸುವದು, ಮುಸಲ್ಮಾನರ ಮಸೀದೆ, ಧರ್ಮಗ್ರಂಥಗಳನ್ನು ಮನ್ನಿಸಿ ರಕ್ಷಿಸುವದು, ಇವೆಲ್ಲ ಗುಣಗಳೇನೂ ಸಾಮಾನ್ಯ ಸದ್ಗುಣಗಳಲ್ಲ.

**ಹ್ಯಾವೆಲ್ಲಸಾಹೇಬರು:—** ಗುಪ್ತ ವಿಕ್ರಮಾದಿತ್ಯನನ್ನು ಕುರಿತು ಬರೆಯುವಾಗ ಅನ್ನುವದು:—ಈ ವೀರನ ಅದ್ಭುತ ರಮ್ಯ ಕಥೆಯನ್ನೋದಿದರೆ, ಯುರೋಪದಲ್ಲಿ ಹಾವಳಿ ನಡಿಸಿರುವ ಕಾಡು ಜನರಿಂದ ಈತನು ಹಿಂದುಸ್ಥಾನದ ಸ್ವಾತಂತ್ರ್ಯವನ್ನು ಹೇಗೆ ರಕ್ಷಿಸಿದನೆಂಬುದು ಕಣ್ಣಿಗೆ ಕಟ್ಟುವದು.

---

# ೮ ನೆಯ ಪ್ರಕರಣ.

---

## ರಾಜ್ಯಭಾರ ಕ್ರಮ.

**ಹಿಂದೂ ಜನರ ಶಾಸನ ಪದ್ಧತಿಯನ್ನೋದಿದರೆ, ಅವರದು ಸುಸಂಘಟಿತ ರಾಜ್ಯ ಪದ್ಧತಿ ಇತ್ತೆಂಬುವದಕ್ಕೆ ಬೇಕಾದಷ್ಟು ಆಧಾರಗಳು ದೊರೆಯುವವು.**

—ಕರ್ನಲ್ ಬ್ರಿಗ್ಸ.

ಆರ್ಯರ ಶಾಸನ ಪದ್ಧತಿಯನ್ನು ಚನ್ನಾಗಿ ಅಭ್ಯಾಸ ಮಾಡಿದರೆ, ಅವರ ಬುದ್ಧಿಯ ಬಗ್ಗೆ ಪ್ರತಿಯೊಬ್ಬರಿಗೂ ಕೌತುಕವೆನಿಸದಿರದು; ಯಾಕಂದರೆ, ಆರ್ಯ ಶಾಸನ ಪದ್ಧತಿಯಲ್ಲಿ ತ್ಯಾಗ–ಭೋಗಗಳೂ, ಶಾಂತಿ–ಚಟುವಟಿಕೆಗಳೂ, ಒಂದುಗೂಡಿರುತ್ತವೆ. ಸ್ವಾಭಾವಿಕವಾಗಿಯೇ ಆರ್ಯರಲ್ಲಿದ್ದ ಆಧ್ಯಾತ್ಮಿಕ ಹಾಗೂ ಅವರ ಅಸಾಮಾನ್ಯವಾದ ಸೃಷ್ಟಿ ನಿರೀಕ್ಷಣ ಶಕ್ತಿಗಳೇ ಜಗತ್ತಿನ ವಿಷಯದಲ್ಲಿ ಇಷ್ಟೊಂದು ಸೂಕ್ಷ್ಮವಾಗಿಯೂ ಎಲ್ಲ ವಿಧದಿಂದಲೂ ವಿಚಾರಿಸಲು ಕಾರಣವಾದವು. ಆರ್ಯರು ಪ್ರತಿಯೊಂದರಲ್ಲಿ ಸೃಷ್ಟಿದೇವಿಯ ಪ್ರತ್ಯಕ್ಷ ಕೈಯನ್ನು ನೋಡಿದರು; ಆದುದರಿಂದಲೇ ಅವರು ಮಾಡಿದ ಕೆಲಸವು ಸತ್ಯದೊಳಗಿಂದ ತೆಗೆದಂತಾಗಿದೆ. ಹೀಗೆ ಅವರ ದೃಷ್ಟಿಯು ಶುದ್ಧವಾಗಿರುವದರಿಂದಲೇ, ಅವರು ತಮ್ಮಲ್ಲಿರುವ ಸತ್ವಶುದ್ಧಿಯ ಬಲದಿಂದ ಹಿಂದೂ ಕಟ್ಟಳೆಗಳನ್ನೂ, ಸಾಮಾಜಿಕ ಹಾಗೂ ರಾಜಕೀಯ ಸಂಸ್ಥೆಗಳನ್ನೂ ಶುದ್ಧಗೊಳಿಸಿ, ಅವನ್ನು ಬಹು ದಿನ

ಬಾಳುವಂತೆಯೂ, ಬೆಳಗುವಂತೆಯೂ ಮಾಡಿದರು.

ರಾಜ್ಯದಾಡಳಿತವು ಸರಿಯಾಗಿಲ್ಲದ ಜನಾಂಗದ ಸಂಖ್ಯೆಯು ಬೆಳೆಯು ದೆಂದು ರಾಜನೀತಿಸಿದ್ಧಾಂತದ ಪುರಸ್ಕರ್ತನಾದ ಎಡ್‌ಮಂಡ ಬರ್ಕನು ಒಂದೆಡೆಯಲ್ಲಿ ನುಡಿದಿರುವನು. ಆಧುನಿಕ ರಾಜ ಶಾಸನ ಪದ್ಧತಿಯು ಮೇಲಿನ ಸೂಕ್ತಿಯನ್ನು ನಾವು ಸಿದ್ಧಾಂತವೆಂದಿಟ್ಟುಕೊಂಡರೆ, ಪ್ರಾಚೀನ ಆರ್ಯರು ಈ ವಿಷಯದಲ್ಲಿಯೂ ಹಿಂದುಳಿದಿರಲಿಲ್ಲವೆಂದು ಹೇಳಬಹುದಾ ಗಿದೆ. ಜನಾಂಗದ ಆಡಳಿತವು ಒಳಿತು ಅಥವಾ ಕೆಡಕು ಇರುವದೆಂಬು ದಕ್ಕೆ ಆಯಾ ಜನಾಂಗದ ಜನ ಸಂಖ್ಯೆ ಹಾಗೂ ಆರ್ಥಿಕ ಸ್ಥಿತಿಯೇ ಮುಖ್ಯ ಗುರುತುಗಳು.

ಪ್ರಾಚೀನ ಗ್ರೀಕ ಬರಹಗಾರರೂ, ಪ್ರವಾಸಿಗಳೂ ತಮ್ಮ ಕಣ್ಣುಟ್ಟಿ ನೋಡಿ, 'ಜಗದಲ್ಲೆಲ್ಲ ಆರ್ಯಜನಾಂಗವೇ ದೊಡ್ಡ' ದೆಂದು ಬರೆದಿಟ್ಟಿ ರುವರು.

**ಮೆಗಾಸ್ಥೆನಿಸನು ಅನ್ನುವದು:—** ಹಿಂದುಸ್ಥಾನದೊಳಗೆ ೧೨೦ ಜನಾಂಗಗಳಿವೆ. **ಏರಿಯನೆಂಬುವನು** "ಹಿಂದೂಗಳ ಜನಸಂಖ್ಯೆಯ ನ್ನೆಣಿಸುವದು ಅಸಾಧ್ಯವೆಂದೂ, ಪಟ್ಟಣಗಳ ಲೆಕ್ಕಮಾಡುವದು ಆಗದ ಮಾತೆಂದೂ ನುಡಿದಿರುವನು."

**ಟ್ರೆಸಿಯಸನೆಂಬುವನು ಅನ್ನುವದು:—** ಎಲ್ಲ ಜನಾಂಗದವರನ್ನು ಕೂಡಿಸಿದರೆ ಆಗುವ ಜನಸಂಖ್ಯೆಯೇ ಹಿಂದೂಗಳದು. ಹಿಂದೂದೇಶದ ಜನಸಂಖ್ಯೆಯು ಇಷ್ಟು ಇತ್ತೆಂತಲೇ, ಅಲ್ಲಿಂದ ಅನೇಕ ಜನಾಂಗದವರು ಬೇರೆ ಜನಾಂಗಗಳಿಗೆ ಹೋಗಿ ಒಕ್ಕಲಾಗಿರಲು ಅನುವಾಯಿತು.
ಸಂಪತ್ತಿಯಲ್ಲಂತೂ ಹಿಂದೂದೇಶಕ್ಕೆ ಸುವರ್ಣಭೂಮಿಯೆಂಬುವ ಹೆಸರು ರೂಢಿಯಾಗಿತ್ತು. ಒಂದಾನೊಂದು ಕಾಲಕ್ಕೆ ಹಿಂದೂದೇಶದಲ್ಲಿರುವಷ್ಟು ಜನ–ಧನ ಸಂಪತ್ತಿಯು ಇನ್ನಾವ ಜನಾಂಗದಲ್ಲಿಯೂ ಇರಲಿಲ್ಲ. ಪ್ರಾಚೀನ ಕಾಲಕ್ಕೆ ಹಿಂದುಸ್ಥಾನದಲ್ಲಿ ಕಳ್ಳರು ಇರಲಿಲ್ಲ. ಜನರು ತಮ್ಮ ಮನೆಯ ಬಾಗಿಲುಗಳನ್ನು ಕೂಡ ಇಕ್ಕುತ್ತಿರಲಿಲ್ಲವೆಂಬುವ ಮತಗಳ ಮೇಲಿಂದ ತತ್ಕಾಲೀನ ರಾಜ್ಯಪದ್ಧತಿಯು ಎಷ್ಟು ಚನ್ನಾಗಿತ್ತೆಂಬುದು ತಿಳಿದು ಬರು ವದು; ಅದಕ್ಕೆ ಬೇರೆ ಆಧಾರಗಳೇ ಬೇಡ.

ರಾಜ್ಯಪದ್ಧತಿಯಾದರೂ ಆಯಾ ಜನಾಂಗದವರ ಶೀಲ, ಜೀವನಸ್ಥಿತಿ ಹಾಗೂ ಅವರ ಸಾಮಾಜಿಕ ಪದ್ಧತಿಯ ಮೂಲತತ್ವಗಳನ್ನವಲಂಬಿಸಿರುತ್ತದೆ; ಮತ್ತು ಅವುಗಳು ಮಾರ್ಪಡುವಂತೆ, ರಾಜ್ಯಪದ್ಧತಿಯಲ್ಲಿಯೂ ಮಾರ್ಪಾಟಾಗುವದು. ಸ್ಥೂಲ ದೃಷ್ಟಿಯಿಂದ ನೋಡಿದರೆ, ಸದ್ಗುಣ, ಸಚ್ಛೀಲ, ಸದ್ಬುದ್ಧಿ, ಔದಾರ್ಯವುಳ್ಳ ಜನರಿಗೆ ತಲೆಯೆತ್ತಲು ಅಸ್ಪದ ಕೊಡುವದೇ ಉತ್ತಮವಾದ ರಾಜ್ಯಪದ್ಧತಿಯು; ದುಷ್ಟರು, ಕ್ಷುದ್ರರು, ಸ್ವಾರ್ಥಿಗಳು, ದುಃಶೀಲರೂ ತಲೆಯೆತ್ತಲಿಕ್ಕೆ ಅನುವು ಕೊಡುವದೇ ದುಷ್ಟ ರಾಜ್ಯಪದ್ಧತಿಯು. ಹರ್ಬರ್ಟ ಸ್ಪೆನ್ಸರನು ಅನ್ನುವದಂತೆ, ರಾಷ್ಟ್ರ ಸಂರಕ್ಷಣೆ, ವ್ಯಕ್ತಿರಕ್ಷಣೆ, ಇವೇ ಸುರಾಜ್ಯದ ಮುಖ್ಯ ಲಕ್ಷಣಗಳು.

ಜನಾಂಗ ಜೀವನದ ದಿನದ ವ್ಯವಹಾರದೊಳಗೆ ಮೇಲ್ತರದ ನೀತಿ-ತತ್ವವು ಪ್ರತಿಯೊಂದು ವ್ಯಕ್ತಿಗೆ ಮಾರ್ಗದರ್ಶಿಯಾಗಿದ್ದರೆ, ಅಂಥ ದೇಶದ ಆಡಳಿತೆಯಲ್ಲಿ ಪಕ್ಷ-ಪಂಗಡಗಳ ಕಲಹವು ಏಳದು. ವ್ಯಕ್ತಿ-ವ್ಯಕ್ತಿಗಳಲ್ಲಿಯೂ, ಪಕ್ಷ-ಪರಪಕ್ಷಗಳಲ್ಲಿಯೂ ಅಧಿಕಾರ ಹಾಗೂ ಸ್ವರಕ್ಷಣೆಗಾಗಿ ಎಡೆಬಿಡದೆ ಜಗಳಗಳು ನಡೆಯುವವು. ಉಚ್ಚವಾದ ಈ ನೀತಿಯ ದಾರಿಯನ್ನು ನಾವು ಹಿಡಿದು ನಡೆದರೆ, ನಮಗೆ ಮುಂದೆ ಶಾಶ್ವತವಾದ ಆಧ್ಯಾತ್ಮಿಕ ದಾರಿಯು ಸಿಕ್ಕು, ಅದರಿಂದ ನಮ್ಮ ಬಾಳುವೆಯು ಸುಖಕರವಾಗುವದು. ಇದೀಗ ಸುರಾಜ್ಯದ ಹೆಗ್ಗುರಿಯು; ಮತ್ತು ಇದರಿಂದಲೇ ಸುರಾಜ್ಯವು ಸಾಧ್ಯವಾಗುವದು.

ಈ ಸನಾತನ ಸತ್ಯವು ಆರ್ಯ ಋಷಿಗಳಿಗೆ ಮನದಟ್ಟಾದ್ದರಿಂದಲೇ ನೈತಿಕ, ಪಾರಮಾರ್ಥಿಕ ತತ್ವಗಳ ಆಧಾರಗಳಿಂದಲೇ ಜನರು ತಮ್ಮ ಶೀಲ ಹಾಗೂ ರಾಜಕೀಯ ಅಭ್ಯುದಯವನ್ನು ಸಾಧಿಸಲಿಕ್ಕೆಬೇಕೆಂದು ಒತ್ತಿ ಹೇಳಿದರು. ಮನುಷ್ಯನ ಸ್ವಭಾವದಲ್ಲಿ ನೀತಿಯ ಬಿಗಟು ಹೆಚ್ಚಿಗಿದ್ದರೆ ಸಾತಂತ್ರ್ಯವನ್ನನುಭವಿಸಲು ಹೆಚ್ಚು ಅನುಕೂಲವಾಗುತ್ತದೆ. ಈ ದೃಷ್ಟಿಯಿಂದ ವಿಚಾರಿಸಿದರೆ, ತಮ್ಮನ್ನು ತಾವು ಚನ್ನಾಗಿ ಆಳಿಕೊಂಡವರ ಮೇಲೆ ಇನ್ನೊಬ್ಬರ ಅಂಕೆಯು ಅವಶ್ಯವಿಲ್ಲೆಂಬುವ ಮಾತು ತನ್ನಾರೆ ಸತ್ಯವೆನಿಸುತ್ತದೆ. ಮೇಲ್ನೋರಿಕೆಯ ಸರಕಾರವಿರುವದೊಂದು ಬಗೆಯ ಪಾಪವು; ಇಂಥ ಸರಕಾರವಿದ್ದರೆ ಸರಕಾರವಿರುವದರ ನಿಜವಾದ ಉದ್ದೇಶಕ್ಕೆ ಅರೆದಾಳ

ಬಡಿದಂತಾಗುತ್ತದೆ;

ಪ್ರಾಚೀನ ಹಿಂದುಸ್ಥಾನದೊಳಗಿನ ಜನರು ಧಾರ್ಮಿಕ ನೈತಿಕ ದೃಷ್ಟಿಯಿಂದ ಬಹು ಮುಂದೊರೆದವರಾದ್ದರಿಂದ, ಅವರನ್ನು ಕೆಟ್ಟ ರೀತಿಯಿಂದಾಳಲು ಅರಸರಿಗೆ ಎದೆಯಾಗುತ್ತಿದ್ದಿಲ್ಲ. ಅವರು ತಮ್ಮ ರಾಷ್ಟ್ರೀಯ ಐಕ್ಯ ಹಾಗು ರಾಷ್ಟ್ರೀಯ ಕ್ಷೇಮಕ್ಕನುಗುಣವಾಗಿ ಮಿಗಿಲಾದ ವ್ಯಕ್ತಿ ಸ್ವಾತಂತ್ರ್ಯವನ್ನನುಭವಿಸಿದರು. ಆ ಕಾಲದಲ್ಲಿ ಜನರ ನೀತಿಯು ಹಾಗೂ ಧರ್ಮದ ಮೆಟ್ಟಿಲು ಅಷ್ಟು ಮೇಲಕ್ಕೇರಿದ್ದರಿಂದ ಆ ಸ್ವಾತಂತ್ರ್ಯವನ್ನು ಸಂಪೂರ್ಣವಾಗಿ ಅನುಭವಿಸುವದು ಅನಾಯಾಸವಾಗಿತ್ತು.

ಭಾರತೀಯ ಯುದ್ಧವಾದನಂತರ, ಹಿಂದೂ ನಯತಂತ್ರಜ್ಞರು ತಮ್ಮ ಹಳೆಯ ಶಾಸನ ಪದ್ಧತಿಯನ್ನು ಕಾಯ್ದುಕೊಂಡು, ಕಾಲಕ್ಕನುಸಾರವಾಗಿ ಅದರೊಳಗೆ ಹೆಚ್ಚುಕಡಿಮೆ ಮಾಡುತ್ತ ನಡೆದರು. ಇದ್ದುದನ್ನು ಕಾಯ್ದುಕೊಂಡು ಮುಂದಿನ ಸುಧಾರಣೆಗೆ ಇಂಬುಗೊಟ್ಟುಕೊಳ್ಳುವವನೇ ನಿಜವಾದ ರಾಜಕಾರ್ಯ ಪ್ರವೀಣನೆಂದು ಒಂದೆಡೆಯಲ್ಲಿ ಬರ್ಕನು ನುಡಿದಿರುವನು; ಇದಾಗ ಆರ್ಯರವಿಷಯದಲ್ಲಿ ಸಾರ್ಥಕವಾಯಿತು. ಈ ಮೇರೆಗೆ ಕಲಿಯುಗದ ಕೇಡುಗಾಲವು ಅಡಿಯಿಡಲು, ಧರ್ಮ ನೀತಿಗಳನ್ನು ಜನರು ಮೊದಲಿಗಿಂತ ಹೆಚ್ಚು ಉಪೇಕ್ಷಿಸತೊಡಗಿದ್ದರಿಂದ ವ್ಯಕ್ತಿ ಸ್ವಾತಂತ್ರ್ಯಕ್ಕೆ ಧಕ್ಕೆ ತಗಲಿತು; ಆದರೂ ಆರ್ಯರ ಶಾಸನ ಪದ್ಧತಿಯು ನೆಲಗಟ್ಟು ಬಹು ಭದ್ರವಾಗಿರುವ ಮೂಲಕ, ಕಾಲವು ಬದಲಾದಂತೆ ಅವಶ್ಯ ಕಂಡಲ್ಲಿ ಹೆಚ್ಚು ಕಡಿಮೆ ಮಾಡಿಕೊಂಡರೂ, ಅವರು ತಮ್ಮ ಹಳೆಯ ತತ್ವಗಳನ್ನು ಅಲಕ್ಷಿಸಲಿಲ್ಲ; ಹೀಗೆ ಬುನಾದಿಯ ರಾಜಕೀಯ ಸಂಸ್ಕೃತಿಯ ಜೀವಾಳವನ್ನು ಅವರು ಕಾಯುತ್ತ ಬಂದರೂ, ಹಿಂದುಸ್ಥಾನಕ್ಕೆ ಪರದೇಶದವರ ಕಾಲುಗಾಲ ಹತ್ತಿದೊಡನೆ ಅದೆಲ್ಲವೂ ತಾನಾಗಿಯೇ ಕರಗಿ ಹೋಯಿತು. ಹಿಂದೂ ಜನರ ರಾಜಕೀಯ ಸ್ವಾತಂತ್ರ್ಯವನ್ನು ಕುರಿತು ಅನೇಕ ಯುರೋಪಿಯರು ಬಾಯ್ತುಂಬ ಹೊಗಳಿರುವರು. ಅವುಗಳಲ್ಲಿ ಕೆಲವನ್ನು ಮಾತ್ರ ಸಾರಾಂಶವಾಗಿ ವಾಚಕರ ಗಮನಕ್ಕೆ ತಂದು ಕೊಡುವೆವು.

**ಮಿರಿಯನ್ನಸು ಅನ್ನುವದು:—** ಪ್ರತಿಯೊಬ್ಬ ಹಿಂದುವು ಸ್ವತಂತ್ರವಿರುವದನ್ನು ಕಂಡರೆ, ಬಹು ಕೌತುಕವೆನಿಸುತ್ತದೆ.

**ಲೆಫ್ಟನಂಟ ಕರ್ನಲ್ ಮೂರ್ಕವಿಲ್ಕ್ಸರನ್ನುವದು:—** ಹಿಂದೂ ದೇಶದೊಳಗಿನ ಪ್ರತಿಯೊಂದು ಹಳ್ಳಿಯು ತನ್ನಷ್ಟಕ್ಕೆ ಸ್ವತಂತ್ರವಿತ್ತು; ಹೀಗೆ ನೋಡಿದರೆ, ಇಡೀ ಹಿಂದೂದೇಶವೇ ಇಂಥ ರಾಜ್ಯಗಳದೊಂದು ಸಮೂಹವಾಗಿತ್ತು.

**ಮಿ. ಜೇಮ್ಸಮಿಲ್ಲರು ನುಡಿಯುವದು:—** ಆರ್ಯರ ಪುರಾತನ ರಾಜಕೀಯ ಸಂಸ್ಥೆ ಹಾಗೂ ಕಟ್ಟಳೆಗಳ ಜೀವಾಳವನ್ನು ಕುರಿತು ಆಲೋಚಿಸಿದರೆ, ಅವುಗಳಲ್ಲಿ ಪ್ರಜಾಧಿಪತ್ಯದ ಸೂಕ್ಷ್ಮವಾದ ಸುಳುವುಗಳು ಸ್ಪಷ್ಟವಾಗಿ ಕಾಣಿಸುತ್ತವೆ.

**ಸರ್ ಚಾರ್ಲಸ ಮೆಟ್‍ಕಾಫರು:—** ಹಿಂದೂದೇಶದ ಪ್ರಾತಿನಿಧಿಕ ಸಂಸ್ಥೆಗಳನ್ನು ಕುರಿತು ಬರೆಯುವಾಗ ಅನ್ನುವದು:— ಗ್ರಾಮ ಪಂಚಾಯತಿಗಳೆಂದರೆ, ಚಿಕ್ಕ ಚಿಕ್ಕ ಪ್ರಜಾಧಿಪತ್ಯದ ಸಂಸ್ಥೆಗಳೇ ಸೈ; ಅವು ತಮ್ಮ ಮಟ್ಟಿಗೆ ಸ್ವತಂತ್ರವಿರುವವಲ್ಲದೆ, ಸ್ವಾವಲಂಬಿಯಾಗಿರುವವು; ಮತ್ತು ಅವು ಬಹು ದಿನ ಬಾಳುವಂಥವಿರುವವು. ಹಲವು ಅರಸರ ವಂಶಾನುವಂಶಗಳು ನಾಶವಾದವು; ಒಂದರ ಹಿಂದೊಂದು ರಾಜ್ಯಕ್ರಾಂತಿಗಳಾದವು; ಪಠಾಣರೂ, ಮೊಗಲರೂ, ಮರಾಟರೂ, ಸೀಖರೂ, ಆಳಿಹೋದರೂ ಗ್ರಾಮ ಪಂಚಾಯತಿಗಳೆಂಬವು ಹಾಗೇ ಬಾಳಿಕೊಂಡಿವೆ. ತನ್ನಷ್ಟಕ್ಕೆ ಸ್ವತಂತ್ರ ಸಂಸ್ಥಾನವಾಗಿರುವ ಗ್ರಾಮಸಂಸ್ಥೆಯು ಹಿಂದೂಜನರ ಸುಖಕ್ಕೂ ಸ್ವಾತಂತ್ರ್ಯಕ್ಕೂ ಬಹು ಮಟ್ಟಿಗೆ ಕಾರಣವಾಗಿದೆ."

ಇತ್ತೀಚೆ ದೊರೆತ ಕ್ರಿ. ಶ- ೮೬೩ ವರ್ಷದ ಶಿಲಾಲಿಪಿಗಳನ್ನು ನೋಡಲಾಗಿ ( ದಕ್ಷಿಣ ಹಿಂದುಸ್ಥಾನದಲ್ಲಿ ) ಹಿಂದೂದೇಶದಲ್ಲಿ ಪ್ರಾಚೀನ ಕಾಲಕ್ಕೆ ಎಲ್ಲ ಗ್ರಾಮಗಳೂ ಪಟ್ಟಣಗಳೂ ಪ್ರಾತಿನಿಧಿಕ ರಾಜ್ಯ ಪದ್ಧತಿಯಿಂದ ಸುಖವಾಗಿದ್ದವೆಂದೂ, ಅಲ್ಲದೆ, ತತ್ಕಾಲೀನ ೧ ನೇ ಪರಾಂತಕನು ಈ ಪ್ರಾತಿನಿಧಿಕ ಸಂಸ್ಥೆಗಳನ್ನೂ ಸಭೆಗಳನ್ನೂ ಬಹು ಬಲವಾಗಿ ಬಳಕೆಯಲ್ಲಿ ತಂದಿದ್ದನೆಂದೂ ತಿಳಿಯುತ್ತದೆ. ಪಲ್ಲವರಾಯರ ಆಳಿಕೆಯ ಶಾಸನಗಳಲ್ಲಿಯೂ ಗಂಗರ ಆಳಿಕೆಯಲ್ಲಿಯೂ (೯ ನೇ ಶತಮಾನದಲ್ಲಿ) ಈ ತರದ ಗ್ರಾಮ ಸಂಸ್ಥೆಗಳಿದ್ದವೆಂದು ಕಂಡು ಬರುತ್ತದೆ. ಕ್ರಿ. ಶ. ೧೦ ಶತಮಾನದಾದಿಯಲ್ಲಿಯೇ ಈ ಸಂಸ್ಥೆಗಳು ದಕ್ಷಿಣ ಹಿಂದುಸ್ಥಾನದಲ್ಲಿ ಪ್ರಚಾರದಲ್ಲಿದ್ದ ಬಗ್ಗೆ ಅನೇಕ

ಆಧಾರಗಳು ಸಿಗುತ್ತವೆ. ೧೯೦೪ ಇಸ್ವಿಯಲ್ಲಿ ಮದ್ರಾಸ ಇಲಾಖೆಯೊಳಗೆ ದೊರೆತ ಒಂದು ಶಿಲಾಶಾಸನದಿಂದ ಹಿಂದುಸ್ಥಾನದಲ್ಲಿ ಪ್ರಾಚೀನ ಕಾಲಕ್ಕೆ ಅಂದರೆ ೧೦ ನೇ ಶತಮಾನದವರೆಗೆ ಗ್ರಾಮ ಆಳುವ ಕ್ರಮ ಅಂದರೆ ಈಗಿನ ಮುನಸಿಪಾಲಟಿ ಪದ್ಧತಿ ಇತ್ತೆಂದು ಸ್ಪಷ್ಟವಾಗುತ್ತದೆ; ಆದುದರಿಂದ ಶಿಲಾ ಶಾಸನದಲ್ಲಿಯ ಸಂಗತಿಗಳಿನ್ನು ವಿವರವಾಗಿ ಉದ್ಧರಿಸುವೆವು— ಚೋಳ ನಾಡಿನಲ್ಲಿಯ ಉತ್ತರ ಮೇರು ಚತುರ್ವೇದಿ ಮಂಗಲಂ ಎಂಬಲ್ಲಿಯ ಗ್ರಾಮ ಸಭೆಯ ಸಭಾಸದರು ರಾಜನ ಅಪ್ಪಣೆಯಿಂದ ಸಭೆ ಮಾಡಿ ಪ್ರತಿ ವರ್ಷಕ್ಕೆ ಗ್ರಾಮ ವ್ಯವಸ್ಥೆಗಾಗಿ ತೋಟದ ಕಮಿಟಿ, ಕೆರೆಯ ಕಮಿಟಿ ನ್ಯಾಯ ತೀರಿಸುವ ಕಮಿಟಿ ಮುಂತಾದವುಗಳನ್ನು ಸ್ಥಾಪಿಸುತ್ತಿದ್ದರು. ಗ್ರಾಮ ಸಭೆಗಾಗಿ ಸಭಾಸದರನ್ನಾರಿಸುವ ವೇಳೆಯಲ್ಲಿ ಅವರು ಆ ಗ್ರಾಮ ದಲ್ಲಿ ೩೦ ಗುಂಪು (ವಾರ್ಡ) ಗಳನ್ನು ಕಲ್ಪಿಸಿ, ಮೂವತ್ತು ಗುಂಪಿನಲ್ಲಿಯ ಜನರೆಲ್ಲರೂ ಕೂಡಿ ಹುರಿಯಾಳುಗಳನ್ನು ಆರಿಸುತ್ತಿದ್ದರು. ಹುರಿಯಾಳಿಗಿರ ತಕ್ಕ ಯೋಗ್ಯತೆಗಳು— ಅವನು ಮುಕ್ಕಾಲು ಪಾಲಿಗಿಂತ ದೊಡ್ಡದಿರುವ ಭೂಮಿಯ ಒಡೆಯನಿದ್ದು ಅದಕ್ಕೆ ಕರ ಕೊಡುತ್ತಿರಬೇಕು; ತನ್ನ ಒಡೆತ ನದ ಸ್ಥಳದಲ್ಲಿ ಅತನ ಸ್ವತಂತ್ರ ಮನೆ ಇರಬೇಕು; ಅವನು ಮೂವತ್ತೈದ ವರುಷಕ್ಕಿಂತ ದೊಡ್ಡವನೂ ೭೦ ವರ್ಷದೊಳಗಿನವನೂ ಇರತಕ್ಕದ್ದು. ಎರಡನೆಯವರಿಗೆ ಕಲಿಸಲಿಕ್ಕೆ ಬರುವಷ್ಟು ಮಂತ್ರ ಬ್ರಾಹ್ಮಣವನ್ನು ಕಲಿ ತಿರಬೇಕು; ಹುರಿಯಾಳಾಗಿ ನಿಲ್ಲುವವನು ಒಳ್ಳೇ ಉದ್ಯೋಗ ಮಾಡುವ ವನೂ, ಸಂಭಾವಿತನೂ ಇರತಕ್ಕದ್ದು; ಅಥವಾ ಅವನು ಪ್ರಾಮಾಣಿಕ ತನದಿಂದ ಯಾವದೊಂದು ಉದ್ಯಮದಿಂದ ಹೊಟ್ಟೆತುಂಬಿಕೊಳ್ಳುತ್ತಿರ ಬೇಕು; ಅವನು ಶುದ್ಧಮನಸ್ಸಿನವನಿದ್ದು, ಗ್ರಾಮಸಭೆಯಲ್ಲಿ ಹಿಂದಕ್ಕೆ ೩ ವರ್ಷಗಳ ವರೆಗೆ ಸಭಾಸದನಿದ್ದಿರಕೂಡದು; ಇಂಥವನ ಸಂಬಂಧಿಕರು ಅಂದರೆ ತಂದೆ, ಮಗ, ಅಥವಾ ಅಜ್ಜರು ಚೀಟಿ ಹಾಕಲಾಗದು; ಪ್ರತಿ ಯೊಂದು ಭಾಗದ ಮತ–ಚೀಟಿಯ ಪುಡಿಕೆಗಳು ಬೇರೆ ಬೇರೆ ಇರತಕ್ಕದ್ದು, ಎಲ್ಲರೂ ಚೀಟಿ ಹಾಕಿದ ನಂತರ ಅವುಗಳನ್ನು ಬೇರೆ ಬೇರೆ ಕಟ್ಟಿ ಒಂದು ಪಾತ್ರೆಯಲ್ಲಿ ಹಾಕಿಟ್ಟು ಗ್ರಾಮಸಭೆಯಲ್ಲಿ (ಚಿಕ್ಕವರು ದೊಡ್ಡವರು ಕೂಡಿದ ಸಭೆ) ಅವುಗಳನ್ನು ತೆಗೆದುನೋಡತಕ್ಕದ್ದು. ಈ ದಿನ ದೇವಾಲಯದು

ಪೂಜಾರರು (ಸಂಬಿಯಾರರು) ತಪ್ಪದೆ, ಯಾವ ನಿಮಿತ್ತ ಹೇಳದೆ ಸಭೆಯ ಒಳಭಾಗದಲ್ಲಿ ಕುಳ್ಳಿರತಕ್ಕದ್ದು; ಈ ಪೂಜಾರರಲ್ಲಿ ಹಿರಿಯುವನಾದ ಒಬ್ಬನು ಎದ್ದುನಿಂತು ಆ ಪಾತ್ರೆಯನ್ನೆತ್ತತಕ್ಕದ್ದು. ಆ ಮೇಲೆ ಒಬ್ಬ ಚಿಕ್ಕ ಹುಡುಗನು ಆ ಪಾತ್ರೆಯನ್ನು ಕೈಯಿಂದ ಅಲ್ಲಾಡಿಸಿ ಆ ಚೀಟಿಗಳೊಳಗಿಂದ ಒಂದು ಚೀಟಿಯನ್ನು ತೆಗೆದು ಅದನ್ನು ಮಧ್ಯಸ್ಥನಾದ ಹಿರಿಯನಿಗೆ ಕೊಡತಕ್ಕದ್ದು; ನಂತರ ಆ ಹೆಸರನ್ನು ಅವನು ಎಲ್ಲರಿಗೆ ಓದಿ ತೋರಿಸತಕ್ಕದ್ದು; ಹೀಗೆ ೩೦ ಗುಂಪುಗಳಿಂದ ಬಂದ ಚೀಟಿಯೊಳಗಿಂದ ಒಂದನ್ನಾರಿಸುತ್ತಿದ್ದರು. ಹೆಚ್ಚಿಗೆ ಹಿರಿಯರು, ಹೆಚ್ಚು ವಿದ್ವಾಂಸರಿದ್ದವರನ್ನು ವಾರ್ಷಿಕ ಮಂಡಲಕ್ಕೆ ಸಭಾಸದರನ್ನಾಗಿ ನಿಯಮಿಸುತ್ತಿದ್ದರು; ಚಿಕ್ಕವರನ್ನು ನ್ಯಾಯ, ತೋಟ, ಸುಂಕ, ಕೆರೆ ಮುಂತಾದ ಖಾತೆಗಳ ವ್ಯವಸ್ಥೆ ಮಾಡುವ ಕಮಿಟಿಗೆ ಸಭಾಸದರನ್ನಾಗಿ ನಿಯಮಿಸುತ್ತಿದ್ದರು. ಆಳಿಹೋದ ಚೋಳ ಅರಸನಾದ ೧ನೇ ರಾಜರಾಜನ ಆಳಿಕೆಯಲ್ಲಿ (ಕ್ರಿ. ಶಕೆ ೧೦೧೩) ಕೊರೆಯಲ್ಪಟ್ಟ ಒಂದು ಶಾಸನದಿಂದ ಆಗ "೧೫೦ ಹಳ್ಳಿಗಳಲ್ಲಿ ಪ್ರಾತಿನಿಧಿಕ ಸಭೆಗಳಿದ್ದವೆಂದೂ, ೪೦ ಗ್ರಾಮಗಳನ್ನು ಮಾತ್ರ ಅಲ್ಲಿಯ ಜನರೇ ತಮ್ಮಷ್ಟಕ್ಕೆ ತಾವು ಆಳುತ್ತಿದ್ದರೆಂದೂ" ತಿಳಿಯುತ್ತದೆ. ಇದೇ ಪದ್ಧತಿಯು ಬೇರೆ ಸಾವಿರಾರು ಹಳ್ಳಿಗಳಲ್ಲಿಯೂ ಬಳಕೆಯಲ್ಲಿರಬಹುದೆಂದು ತರ್ಕಿಸಲು ಅನುಮಾನವಿಲ್ಲ. ದ್ರಾವಿಡರು ಎಲ್ಲಕ್ಕೂ ಮೊದಲು ಗ್ರಾಮ ಸಂಸ್ಥೆಯ ಈ ಪದ್ಧತಿಯನ್ನು ಆರ್ಯರಿಂದಲೇ ಎತ್ತಿಕೊಂಡು ತಮಗನುಕೂಲವಾಗುವಂತೆ ಅದರೊಳಗೆ ಹೆಚ್ಚುಕಡಿಮೆ ಮಾಡಿಕೊಂಡರು; ಅಂತೂ ಒಂದು ಗ್ರಾಮ ಪಂಚಾಯತಿಯಲ್ಲಿ ಗ್ರಾಮದ ಬೇರೆಬೇರೆ ವ್ಯವಸ್ಥೆಗಳನ್ನು ನೋಡಿಕೊಳ್ಳುವಂಥ ಉಪ-ಮಂಡಲಗಳಿರುತ್ತಿದ್ದವೆಂದು ಆ ಶಿಲಾಲಿಪಿಗಳಿಂದ ಒಡೆದು ಕಾಣಿಸುತ್ತದೆ.

ಪ್ರಾಚೀನಕಾಲದ ರಾಜ್ಯತಂತ್ರ, ರಾಜನೀತಿ, ಆಡಳಿತೆಯ ಕ್ರಮ ಇವೆಲ್ಲವುಗಳನ್ನು ಕುರಿತು ಬರೆಯಲ್ಪಟ್ಟ ಗ್ರಂಥಗಳನ್ನೋದಿದರೆ, ತತ್ಕಾಲಕ್ಕೆ ರಾಜಕೀಯ ಕಲ್ಪನೆಗಳ ವಿಕಾಸವು ಎಷ್ಟು ಪೂರ್ಣಾವಸ್ಥೆಗೆ ಮುಟ್ಟಿತ್ತೆಂಬುದು ನಮಗೀಗ ಮನದಟ್ಟಾಗುವದು. ಅವುಗಳಲ್ಲಿಯ ಅನೇಕ ಪುಸ್ತಕಗಳು ಪರ್ಸಿಯನ್ ಹಾಗೂ ಯುರೋಪಿಯ ಭಾಷೆಗಳಲ್ಲಿಯೂ

ಭಾಷಾಂತರಿಸಲ್ಪಟ್ಟಿದ್ದವು. ಅಬೂ ಸಭಾದ ಎಂಬುವನು ೧೧೮೦ ಇಸ್ವಿಯಲ್ಲಿ ರಾಜನೀತಿ ಪುಸ್ತಕವನ್ನು ಭಾಷಾಂತರಿಸಿದನೆಂದೂ, ನಶರವಾನನ ಮಂತ್ರಿಯು ಹಿಂದುಸ್ಥಾನಕ್ಕೆ ಬಂದು ರಾಜಕಾರ್ಯದ ಶಿಕ್ಷಣ ಪಡೆದನೆಂದೂ ಗ್ರಂಥಾಂತರಗಳಿಂದ ತಿಳಿಯುತ್ತದೆ.

**ಲಾರ್ಡ ರೋನಾಲ್ಡಸೆಯವರ ಮತವು:—** "ಅನೇಕ ಶತಕಗಳಾಚೆಯೇ ಹಿಂದುಸ್ಥಾನವು ತನ್ನದೊಂದು ಸ್ವರಾಜ್ಯ ಪದ್ಧತಿಯನ್ನು ಅತ್ಯುತ್ತಮ ರೀತಿಯಿಂದ ಕಟ್ಟಿ ಅದನ್ನೇ ಬೆಳಿಸಿತು."

ಒಳ್ಳೇ ಸರಕಾರವೆಂಬುದಕ್ಕೆ ಅದರ ಕಟ್ಟಳೆಯೇ ಒರೆಗಲ್ಲು; ಹಿಂದೂಗಳು ರಚಿಸಿದ ಕಟ್ಟಳೆಯ ಗ್ರಂಥಗಳನ್ನು ನೋಡಿದರೆ, ಅವುಗಳಲ್ಲಿ ಕಂಡುಬರುವ ಬುದ್ಧಿವಂತಿಕೆ, ಹಾಗೂ ಸನಾತನಗಳ ಬಗ್ಗೆ ಯಾರಿಗಾದರೂ ಸೋಜಿಗವೆನಿಸಬಹುದು. ಅವುಗಳಲ್ಲಿಯ ತತ್ವಗಳು ಆಗಾಗ್ಗೆ ಮಾರ್ಪಡುವಂಥವಿಲ್ಲದಿದ್ದರೂ, ಹಿಂದೂ ಸಮಾಜದ ನಾನಾ ಬಗೆಯ ಸ್ಥಿತಿಗತಿಗಳಿಗೆ ಅವು ಹೋಲುವಂತಿವೆ. ಈ ಬಗ್ಗೆ

**ಸರ ವಿಲಯಂ ಜೋನ್ಸರು ಅನ್ನುವದು:—** ಮನುವಿನ ಧರ್ಮಶಾಸ್ತ್ರಗಳು, ಸ್ಪಾರ್ಟಾದ ಲಾಯಕರ್ಗಸ ಅಥವಾ ಸೋಲೊಮನ್ನನಿಗಿಂತ ಪುರಾತನದವು; ಲಾಯಕರ್ಗಸನು ಹಿಂದೂದೇಶಕ್ಕೆ ಬಂದು ಅಲ್ಲಿಯ ಧರ್ಮಶಾಸ್ತ್ರಗಳನ್ನು ಅಭ್ಯಾಸಮಾಡಿ ಅವುಗಳ ಮಾದರಿಯ ಮೇಲೆಯೇ ಸ್ಪಾರ್ಟಾ ಹಾಗೂ ಗ್ರೀಸದ ಕಟ್ಟಳೆಗಳನ್ನು ರಚಿಸಿದನೆಂದೂ, ಗ್ರೀಕರಿಂದ ಮುಂದೆ ಅವುಗಳನ್ನೇ ರೋಮ ಜನರು ಎತ್ತಿದರೆಂದೂ, ರೋಮರಿಂದ ಇಂಗ್ಲೀಷರು ತೆಗೆದುಕೊಂಡರೆಂದೂ ಇತಿಹಾಸವು ಹೇಳುತ್ತದೆ. ಯುರೋಪ, ಇಜಿಪ್ತ, ಪರ್ಶಿಯದ ಕಟ್ಟಳೆಯಲ್ಲಿ ಮನುವಿನ ವಿಚಾರದ ವರ್ಚಸ್ಸವು ಚೆನ್ನಾಗಿಯೇ ಕಾಣಿಸುತ್ತದೆ.

**ಡಾ. ರಾಬರ್ಟಸನ್ನರು ಅನ್ನುವದು:—** ಹಿಂದೂಧರ್ಮದ ನಿಯಮಗಳನ್ನು ಅತ್ಯಂತ ಸುಧಾರಿಸಿದ ಜನಾಂಗದೊಳಗೆ ಬಳಕೆಯಲ್ಲಿದ್ದ ನಿಯಮಗಳೊಡನೆ ನಿಃಸಂದೇಹವಾಗಿ ಹೋಲಿಸಬಹುದಾಗಿದೆ; ಅವುಗಳ ತತ್ವಗಳನ್ನು ಬಹು ಆಳವಾಗಿ ವಿಚಾರಿಸಿ ಸೋಸಿ ಶಾಸ್ತ್ರಜ್ಞರು ಕಟ್ಟಿದ್ದಾರೆ. ಅವುಗಳನ್ನು ಸೂಕ್ಷ್ಮವಾಗಿ ಅವಲೋಕಿಸಿದರೆ, ಕೆಲವೆಡೆಯಲ್ಲಿ ಹಿಂದೂ

ಧರ್ಮಶಾಸ್ತ್ರಕಾರರು ಯುರೋಪಿಯ ಧರ್ಮಶಾಸ್ತ್ರಕಾರರನ್ನೂ ಮೀರಿಸಿರುವಂತೆ ಕಾಣುತ್ತದೆ."

ಒಂದೆಡೆಯಲ್ಲಿ ಮಿ. ಮಿಲ್ಲಸು ಹಿಂದೂಧರ್ಮ ಶಾಸ್ತ್ರವನ್ನು ಕುರಿತು ಬರೆಯುವಾಗ "ಹಿಂದೂಧರ್ಮಶಾಸ್ತ್ರದ ಕ್ರಮವನ್ನು ಓದಿದರೆ, ಆರ್ಯರು ಕಾಡು ಜನಾಂಗದವರಿದ್ದರೆಂದು ಕಾಣುತ್ತದೆ" ಎಂದು ಉದ್ಗಾರ ತೆಗೆದುದನ್ನೇ ಆಧಾರವಾಗಿಟ್ಟುಕೊಂಡು ವಿಲ್ಸನ್ನ, ಮ್ಯಾಕ್ಸಮುಲ್ಲರ ಮುಂತಾದವರು ಮಿಲ್ಲರ ಅಜ್ಞಾನ, ಅವರ ಹೆಚ್ಚಿನ ಧಾರ್ಷ್ಟ್ಯವನ್ನು ಕುರಿತು ಸಾಧಾರವಾಗಿ ಖಂಡಿಸಿದ್ದಾರೆ.

ಹಿಂದುಸ್ಥಾನದೊಳಗಿರುವ ಪಂಚಾಯತಿಯ ಪದ್ಧತಿಯು ವಿದೇಶಿಯವೆಂದು ಅನ್ನುವದೆಂದರೆ, ಹಿಂದೂ ಧರ್ಮಶಾಸ್ತ್ರದ ಬಗ್ಗೆ ಸಂಪೂರ್ಣ ಅಜ್ಞಾನ ತೋರ್ಪಡಿಸುವಂತಿದೆ. ಮನುವಿನ ಧರ್ಮಶಾಸ್ತ್ರವೆಂಬ ಸಂಸ್ಕೃತ ಗ್ರಂಥವನ್ನು ಡಾ. ಬುಲ್ಲರರು ಇಂಗ್ಲೀಷಿನಲ್ಲಿ ಭಾಷಾಂತರಿಸಿದ್ದು ಅದರಲ್ಲಿ ಅನ್ನುವದು:— ಧರ್ಮಶಾಸ್ತ್ರ–ಶಾಸನಶಾಸ್ತ್ರವನ್ನವಲಂಬಿಸಿ ಜನರ ಗೋಳುಗಳ ವಿಚಾರಣೆ ನಡಿಸಬೇಕೆಂಬುವ ಅರಸನು ಅನುಭವಿಕರೂ, ತಜ್ಞರೂ, ಶಾಸ್ತ್ರಪಾರಂಗತರೂ, ನಿಷ್ಪಕ್ಷಪಾತಿಗಳೂ ಆದ ಮಂತ್ರಿಗಳೊಡನೆ ಓಲಗಕ್ಕೆ ಬಂದು ವಿಚಾರಣೆ ನಡಿಸುವನು " ಎಂದು ಬರೆದಿರುವರು.

ಮದ್ರಾಸದ ವಿದ್ವಾನ್ ನ್ಯಾಯಮೂರ್ತಿಗಳಾಗಿದ್ದ ಸರ ಥಾಮಸ್ ಸ್ಟ್ರೇಂಜ ಸಾಹೇಬರು ಸಾಕ್ಷಿಯ ಬಗ್ಗೆ ಇರುವ ಕಟ್ಟಳೆಯನ್ನು ಕುರಿತು ಬರೆಯುವದು:— ಹಿಂದೂಜನರ ಸಾಕ್ಷಿಯ ಕಟ್ಟಳೆಯನ್ನೋದಿದರೆ ಯಾವ ಯುರೋಪಿಯ ವಕೀಲನಿಗಾದರೂ ಆಶ್ಚರ್ಯವೆನಿಸದಿರದು.

**ಮಿ. ಹ್ಯಾವೆಲ್ಲ ಸಾಹೇಬರು ಕೊಂಡಾಡಿದ್ದು:**– ಹಿಂದುಸ್ಥಾನವು ಪ್ರಾಚೀನಕಾಲದಿಂದಲೂ ಔರಂಗಜೇಬನ ಆಳಿಕೆಯವರೆಗೆ ಕೂಡ ಬೇರೆ ಯುರೋಪಿಯ ದೇಶಗಳಷ್ಟೇ ಸ್ವಾತಂತ್ರ್ಯ ಸುಖವನ್ನನುಭವಿಸಿತು. ಹಿಂದೂಗಳ ಸ್ವಾತಂತ್ರವೆಂಬುದು ಪಾಶ್ಚಾತ್ಯರಂತೆ ಸ್ಥೂಲ ಸ್ವರೂಪದ್ದಿರಲಿಲ್ಲ. ಪ್ರಜಾಧಿಪತ್ಯವೆಂಬ ಹಳ್ಳಿಯ ಪಂಚರ ಸಭೆಯೇ ಸ್ವಾತಂತ್ರ್ಯದ ಧ್ಯೇಯವನ್ನು ರಕ್ಷಿಸಿತು; ಅವರದು ಪ್ರಜಾಧಿಪತ್ಯದ ರಾಜ್ಯಪದ್ಧತಿಯಾಗಿತ್ತು; ಆರ್ಯರು ಪಾಶ್ಚಾತ್ಯರಂತೆ ಬರಿಯ ಸ್ವಾತಂತ್ರ್ಯ ದೇವತೆಯ ಭಕ್ತರಷ್ಟೇ

ಮಾತ್ರ ಇರಲಿಲ್ಲ; ಅವರು ಶಾಸನಪಟ್ಟ ರಾಜತ್ವದ ತತ್ವವನ್ನೇ ಸಮರ್ಥಿಸಿದರು. ಚಂದ್ರಗುಪ್ತನ ಸಾಮ್ರಾಜ್ಯದ ವಿಲಕ್ಷಣ ಸಂಘಟನೆಯೆಂದರೆ, ಒಂದು ಬಗೆಯಿಂದ ನ್ಯಾಯಯುತ್ತ ಪಂಚಾಯತಿಗಳ ಸಾಮಾಜಿಕ ಆರ್ಥಿಕ ಚಟುವಟಿಕೆಗಳ ಕೇಂದ್ರೀಕರಣವೇ ಆಗಿತ್ತು; ಪಾಟಲೀಪುತ್ರದ ಆಳಿಕೆಯು ೩೦ ಜನ ನಾಗರಿಕ ಪ್ರತಿನಿಧಿಗಳ ಕೈಯಲ್ಲಿದ್ದಿತು; ಇವರಲ್ಲಿ ಐದೈದು ಜನರುಳ್ಳ ಒಂದೊಂದು ಉಪಮಂಡಲದವರ ಕಡೆಗೆ ಪಟ್ಟಣದ ಒಂದೊಂದು ಖಾತೆಯು ವ್ಯವಸ್ಥೆಯು ಒಪ್ಪಿಸಲ್ಪಟ್ಟಿತ್ತು; ಈ ಪಂಚರಲ್ಲಿ ಗೌಡ, ಶಾನುಭೋಗ, ಶಿಲ್ಪಿಗ, ಪಾಠಶಾಲೆಯ ಶಿಕ್ಷಕ, ಗಾಯಕ, ಕಥೆಗಾರ ಇಷ್ಟು ವ್ಯವಸಾಯದವರೂ ಇರುತ್ತಿದ್ದರು. ಈಗ ಯುರೋಪದಲ್ಲಿ ಬೆಳೆದು ಮರವಾಗಿ ನಿಂತಿರುವ ರಾಜ್ಯಶಾಸನ ಪದ್ಧತಿಗೆ ಭಾರತೀಯ ಶಾಸನ ಪದ್ಧತಿಯೇ ತಾಯಿ ಬೇರು. ಗ್ರಾಮ ಪಂಚಾಯತಿ ಎಂಬ ಭದ್ರವಾದ ತಳಹದಿಯ ಮೇಲೆಯೇ ಭಾರತೀಯ-ಶಾಸನ ಪದ್ಧತಿಯೆಂಬುದು ೫ ಸಾವಿರ ವರ್ಷಗಳಿಂದ ಈಗಲೂ ಅಲ್ಲಾಡದೆ ನಿಂತಿರುವದು.

**ಲಾರ್ಡ ಮೋರ್ಲೆಯವರು:—** "ಹಿಂದುಸ್ಥಾನದೊಳಗೆ ಹಳ್ಳಿಯೇ ಮುಖ್ಯವಾಗಿ ಸಾಮಾಜಿಕ ಕಟ್ಟಿಗೆ ಭದ್ರವಾದ ತಳಹದಿಯಾಗಿತ್ತು; ಆದುದರಿಂದಲೇ, ಅಸಂಖ್ಯ ರಾಜವಂಶಗಳು ಅಳಿದರೂ ಅದು ಅಳಿಯಲಿಲ್ಲ."

# ೯ ನೆಯ ಪ್ರಕರಣ

---

## ಯುದ್ಧಶಾಸ್ತ್ರ.

**ಯುದ್ಧಪ್ರಿಯ ಜನಾಂಗದವರಿಗಿಂತಲೂ ಹಿಂದುಗಳು ಯುದ್ಧಕ್ಕೆ ನಿಂತಾಗ ಮಿಗಿಲಾದ ಯುದ್ಧಚಾತುರ್ಯವನ್ನು ತೋರಿಸಬಲ್ಲರು; ಸ್ವಧರ್ಮ ಹಾಗೂ ಮಾನಧನವನ್ನು ರಕ್ಷಿಸಲು ಜೀವವನ್ನು ಕೂಡ ನಿವಾಳಿಸಿ ಒಗೆಯಲು ಅವರೆಂದೂ ಹಿಂಜರಿಯರು.**

— ಮಿ. ಎಲ್‌ಫಿನ್‌ಸ್ಟನ್.

ಯುದ್ಧವೆಂಬುದು ಯಾವ ಕಾಲದಲ್ಲಿಯೂ ಎಂಥವರಿಗೂ ತಪ್ಪಿದ್ದಲ್ಲ. ಆದೊಂದು ತಪ್ಪಿಸಲಿಕ್ಕಾಗದ ಅನಿಷ್ಟಕರ್ತವ್ಯ. ಮನುಷ್ಯನು ಒಂದು ದೃಷ್ಟಿಯಿಂದ ಶಾಂತಿಪ್ರಿಯನಿದ್ದರೂ ಮತ್ತೊಂದು ದೃಷ್ಟಿಯಿಂದ ಕಾಮ ಕ್ರೋಧಾದಿ ಷಡ್ರಿಪುಗಳಿಗೆ ಈಡಾಗಿ ತನ್ನನ್ನು ಸಂಪೂರ್ಣವಾಗಿ ಸ್ವಾರ್ಥಕ್ಕೆ ಮಾರಿಕೊಂಡು, ಅವುಗಳೊಡನೆ ತನ್ಮಯನಾಗುವದರಿಂದಲೇ ಯುದ್ಧದ ಪ್ರಸಂಗ ಬರುವದುಂಟು; ಆದುದರಿಂದ ಯುದ್ಧಗಳೆಂಬವು ಮನುಷ್ಯ ಜಾತಿಗೆ ಸ್ವಾಭಾವಿಕವಾದವುಗಳು. ವ್ಯಕ್ತಿಯಾಗಲಿ, ರಾಷ್ಟ್ರವಾಗಲಿ ಯಾವಾಗಲೂ ತನ್ನ ಉನ್ನತಿಗಾಗಿಯೇ ಹೆಣಗಬೇಕಾದ್ದರಿಂದ ಯುದ್ಧ ದಿಂದಲೇ ಒಂದು ವೇಳೆ ಉನ್ನತಿಯಾಗುವಂತಿದ್ದರೆ, ಅದಕ್ಕೆ ಹಿಮ್ಮುಖ ವಾಗಿ ಶಾಂತಿಯಿಂದಿರುವದೇನೂ ವಿಹಿತವಲ್ಲ. ಮನುಷ್ಯನಾಗಲಿ ರಾಷ್ಟ್ರ ವಾಗಲಿ, ಆತ್ಮಗೌರವವನ್ನಿಟ್ಟುಕೊಂಡು ಶಾಂತಿಯಿಂದಿದ್ದರೆ ಅದು ಭೂಷಣ; ಇಲ್ಲದಿದ್ದರೆ ದಾಸ್ಯದಲ್ಲಿದ್ದು ಶಾಂತಿಯಿಂದಿರುವದೆಂದರೆ ಅದು ಸತ್ತ-ಬಾಳು! ಮತ್ತು ಇಂಥ ಸ್ಥಿತಿಯಲ್ಲಿಯೇ ಸಮಾಧಾನ ಹಚ್ಚಿಕೊಂಡರೆ, ದಾಸ್ಯದಿಂದ ದೂಷಿತವಾದ ಮಲಿನ ಹವೆಯಲ್ಲಿರುವದರಿಂದ ಮನುಷ್ಯನ ಅಥವಾ ಜನಾಂಗದ ಬುದ್ಧಿ-ವಿನಯಗಳು ಕೆಟ್ಟು, ಕ್ಷುದ್ರತನ, ಸ್ವಾರ್ಥ, ಮುಂತಾದವು ಗಳಿಗೆ ಬಲಿಬೀಳುವದುಂಟು. ಇಂಥ ಸ್ಥಿತಿಯಲ್ಲಿ ಮನುಷ್ಯನ ಅಥವಾ ಜನಾಂಗದ ನೀತಿವಂತಿಕೆಯ ನಿರಿಗೆಯು ಮೆಲ್ಲಗೆ ಸಡಲಿ, ದುಷ್ಟಿಗೇನೇ ಪಟ್ಟ ಬರುತ್ತದೆ; ಹೀಗೆ ದುಷ್ಟಿನ ಸಾಮ್ರಾಜ್ಯವೇ ಬೆಳೆದು ಬಲಿತು ನಿಂತಾಗ,

ಅನೀತಿಯ ಬೆಳೆಯನ್ನು ಹುರಿದು ನೀತಿಯ ಯುಗವನ್ನು ಸ್ಥಾಪಿಸಲು ಯುದ್ಧವು ಅವಶ್ಯವಿರುತ್ತದೆ.

**ಕ್ಯಾಪ್ಟನ್ನ ಟ್ರಾಯರು ಅನ್ನುವದು:—** " ಹಿಂದುಗಳ ಇತಿಹಾಸ ಪರಂಪರೆಯೆಲ್ಲವೂ ಯುದ್ಧಗಳಿಂದಲೇ ತುಂಬಿದೆ; ಮತ್ತು ಈ ಯುದ್ಧಗಳೆಲ್ಲ ಧರ್ಮದ ದೆಸೆಯಿಂದಲೇ ಆಗಿರುವವು; ಉದಾಹರಣೆಗಾಗಿ, ಸುರಾಸುರರ ಮತ್ತು ಕೌರವ ಪಾಂಡವರ–ರಾಮ–ರಾವಣರ ಯುದ್ಧಗಳು " ಇವೆಲ್ಲ ಧರ್ಮ ಯುದ್ಧಗಳೇ !

ಯುದ್ಧಶಾಸ್ತ್ರವು ಕಲೆಯ ದೃಷ್ಟಿಯಿಂದಲೂ ಬಹು ಮಹತ್ವದ್ದಿರುವದು; ಮತ್ತು ಇದನ್ನು ಆರ್ಯರು ಚನ್ನಾಗಿಯೇ ಅರಿತವರಿದ್ದರು. ಜಗತ್ತಿನಲ್ಲಿಯ ಒಂದೂ ದೇಶವನ್ನು ಬಿಡದಂತೆ ಪ್ರತಿಯೊಂದು ದೇಶಗಳಲ್ಲಿ ಹೊಕ್ಕು ಗುಡುಗಾಡಿ ಅಲ್ಲಿ ತನ್ನ ಪ್ರಭುತ್ವವನ್ನು ಸ್ಥಾಪಿಸಿದ ಭೀಮ, ಅರ್ಜುನ, ಸಗರ, ಬಲಿ ಮಹಾರಾಯರಂಥ ಜಗಮಲ್ಲರನ್ನು ಪಡೆದಂಥ ಜನಾಂಗವು ಜಗತ್ತಿನೊಳಗಿನ ಯಾವ ಜನಾಂಗಕ್ಕಾದರೂ ಯುದ್ಧಶಾಸ್ತ್ರದಲ್ಲಿ ಕಡಮೆಯಾಗುವದುಂಟೇ ?

ಒಂದಾನೊಂದು ಕಾಲಕ್ಕೆ ಹಿಂದೂ ಜನಾಂಗವು ವ್ಯಾಪಾರದಲ್ಲಿ ತೊಡಗಿ, ಪೃಥ್ವಿಯ ಮೇಲಿರುವ ಪ್ರತಿಯೊಂದು ಜನಾಂಗದೊಡನೆ ಸಮುದ್ರ ವ್ಯಾಪಾರ ನಡಿಸುತ್ತಿದ್ದುದರಿಂದ ಅದಕ್ಕೆ ತನ್ನ ಹಡಗುಪಡೆಯನ್ನು ಯಾವಾಗಲೂ ಭದ್ರವಾಗಿಡುವ ಪ್ರಸಂಗ ಬರುತ್ತಿದ್ದಿತು; ಆಗಿನ ಸ್ಥಿತಿಗತಿಗಳನ್ನು ನಿರೀಕ್ಷಿಸಿದರೆ, ಈಗಿನ ಇಂಗ್ಲಂಡದಂತೆಯೇ ಹಿಂದುಸ್ಥಾನದ ಸ್ಥಿತಿಯಿದ್ದು ಅದರ ಹಡಗುಪಡೆಯಾದರೂ ಇಂಗ್ಲಂಡದವರಷ್ಟೇ ಬಲವಾಗಿದ್ದಿತು; ಹಿಂದೂಜನರ ಯುದ್ಧಶಾಸ್ತ್ರದೊಳಗೆ ಹಡಗು–ಪಡೆ ಎಂಬುದೊಂದು ಬೇರೆ ಭಾಗವೇ ಇದೆ; ಮತ್ತು ಅದು ಪುರಾತನಕಾಲದಿಂದಲೂ ಇತ್ತೆಂದು ಮನು ಋಷಿಗಳು ಹೇಳಿರುವರು; ಪಾಂಡವರ ರಕ್ಷಣೆಗಾಗಿ ವಿದುರನು ಕಟ್ಟಿದ ಹಡಗವು ಬಹು ದೊಡ್ಡದಿತ್ತಲ್ಲದೆ, ಅದರಲ್ಲಿ ಯುದ್ಧ ಸಾಮಗ್ರಿಯೂ, ಬಿರುಗಾಳಿಯಿಂದ ಉಳಿಸುವಂಥ ಸಾಹಿತ್ಯಗಳೂ ಇದ್ದವೆಂದು ಆದಿಪರ್ವದಲ್ಲಿ ಹೇಳಲ್ಪಟ್ಟಿದೆ.

ಚಂದ್ರಗುಪ್ತನ ಆಳಿಕೆಯಲ್ಲಿ ಆತನ ಯುದ್ಧಮಂಡಲದಲ್ಲಿ ಹಡಗು

ಪಡೆಯದೊಂದು ಬೇರೆ ಭಾಗವಿತ್ತೆಂದೂ, ಅಶೋಕನು ಲಂಕೆಗೆಹೋಗುವಾಗ ಅವನೊಡನೆ ಸೇನಾಪಡೆಯಂತೆಯೆ ಹಡಗು-ಪಡೆಯಿತ್ತೆಂದೂ ಪ್ರಸಿದ್ಧ ಇತಿಹಾಸಗಾರರಾದ ಮಿ. ವ್ಹಿನ್ಸೆಂಟ ಸ್ಮಿಥರು ಬರೆದಿರುವರು.

ಹಿಂದೂಗಳ ಧನುರ್ವೇದಶಾಸ್ತ್ರವು ಕಳೆದು ಹೋದುದರಿಂದ ಮಹಾಭಾರತ, ಅಗ್ನಿಪುರಾಣ, ಮುಂತಾದ ಗ್ರಂಥಗಳಲ್ಲಿ ದೊರೆಯುವ ಚೂರುಚಾರು ಸಂಗತಿಗಳಿಂದಲೇ ಮಾತ್ರ ನಾವು ಸಮಾಧಾನಪಡಬೇಕಾಗಿದೆ. ಸೈನ್ಯರಚನೆಯಲ್ಲಿ ಉರಸ್ ಅಂದರೆ ಮುಂಭಾಗದದ ಸೈನ್ಯ, ಕಕ್ಷ-ಪಕ್ಷ ಅಂದರೆ ಬದಿಯ ಸೈನ್ಯಗಳು, ಪ್ರತಿಗ್ರಹ ಅಂದರೆ, ಕಾದಿಟ್ಟಸೈನ್ಯ, ಕೋಟಿ ಅಂದರೆ (vanguard) ಮುಂದಳ, ಮಧ್ಯ ಅಂದರೆ, ಮುಂಭಾಗದ ಹಿಂದಿನ ಸೈನ್ಯ, ಪೃಷ್ಠ ಅಂದರೆ ಮಧ್ಯದ ಹಿಂದಣ ಸೈನ್ಯವೆಂದು ಬೇರೆ ಬೇರೆ ಭಾಗಗಳಿದ್ದವು; ದಂಡಿನ ಮೋಹರಕ್ಕೆ ಆರ್ಯರು ವ್ಯೂಹವೆನ್ನುತ್ತಿದ್ದರು; ಮತ್ತು ಮೋಹರ ಕಟ್ಟುವದರಲ್ಲಿ ಅವರದು ಮೇಲುಗೈಯಾಗಿದ್ದಿತು. ವ್ಯೂಹದಲ್ಲಿ ಮಧ್ಯಭೇದಿ, ಅಂತರ್ಭೇದಿ, ಮಕರ, ಶ್ಯೇನ, ಶಕಟ, ಅರ್ಧಚಂದ್ರ, ಸರ್ವತೋಭದ್ರ, ಗೋಮೂತ್ರಿಕ, ದಂಡ, ಭೋಜ, ಮಂಡಲ, ಹೀಗೆ ಪ್ರಕಾರಗಳಿದ್ದವು. ಮಹಾಭಾರತದಲ್ಲಿ ಯುಧಿಷ್ಠಿರನು ಅರ್ಜುನನಿಗೆ ಸೂಚೀಮುಖ ಅಂದರೆ ಸೂಚಿಯ ಮುಖದಷ್ಟು ವ್ಯೂಹವನ್ನು ಸೂಚಿಸಲು ಅರ್ಜುನನು ವಜ್ರವ್ಯೂಹವನ್ನು ಅವನಿಗೆ ತಿರುಗಿ ಸೂಚಿಸಿದ್ದಾನೆ. ದುರ್ಯೋಧನನು ಅಭೇದ್ಯ ವ್ಯೂಹವನ್ನು ಕುರಿತು ಮಾತನಾಡಿರುವನು.

**ಧನುರ್ವೇದ**—ಧನುರ್ವಿದ್ಯೆಯಲ್ಲಿ ಆರ್ಯರು ಬಲು ನಿಪುಣರು; ಧನುರ್ವೇದವು ಆರ್ಯರಿಗೆ ಕೈಯೊಳಗಿನ ಮಾತಾಗಿತ್ತು; ಒಂದೊಂದು ಸಲಕ್ಕೆ ೪-೫ ರ ವರೆಗೆ ಬಾಣಗಳನ್ನು ಹೊಡೆಯುತ್ತಿದ್ದರು; ಅರ್ಜುನನು ದ್ರೌಪದಿಯ ಸ್ವಯಂವರ ಕಾಲಕ್ಕೆ ಹೊಡೆದ ಮತ್ಸ್ಯಭೇದ, ಹಾಗೂ ಭೀಷ್ಮಾಚಾರ್ಯರು ಶರಪಂಜರದ ಮೇಲೆ ಮಲಗಿರಲು ಬಾಣ ಹೊಡೆದು ಅವರ ಬಾಯಲ್ಲಿ ನೀರು ಬೀಳಿಸಿದ ಪರ್ಜನ್ಯಾಸ್ತ್ರ ಇವೆರಡೂ ಅತ್ಯಾಶ್ಚರ್ಯದ ಸಂಗತಿಗಳಾಗಿವೆ. ವೀರನು ಬಿಟ್ಟ ಬಾಣಗಳು ಒಂದು ವೇಳೆ ಗುರಿತಪ್ಪಿದರೆ, ಅವು ತಿರಿಗಿ ಆ ವೀರನ ಕಡೆಗೇ ತಪ್ಪದೆ ಬರುತ್ತಿದ್ದವೆಂಬುದು ಹುಚ್ಚರ ಮಾತೆಂದು ತಿಳಿಯುತ್ತಿದ್ದರು; ಆದರೆ ಆಸ್ಟ್ರೇಲಿಯದಲ್ಲಿ ಇಂಥವು ಇರುವ

ವೆಂದು ಕೇಳಿದಾಗ ಅನೇಕರಿಗೆ ಸಮಾಧಾನವಾಯಿತು.

ಖಡ್ಗಯುದ್ಧದಲ್ಲಿಯೂ ಆರ್ಯರು ಹೆಸರುವಾಸಿಯಾಗಿದ್ದರು; ಈ ಬಗ್ಗೆ ಅರಬರಲ್ಲಿ ಒಂದು ಗಾದೆಯ ಮಾತು ಉಂಟು; ಅದರ ಸಾರಾಂಶ ವೇನಂದರೆ, ಹತ್ತಿ ಹೊಂದಿದವರ ಉರವಣಿಗೆಯು ಹಿಂದೂ ಖಡ್ಗದಿಂದಾದ ಘಾತಿಯಕ್ಕಿಂತಲೂ ಕಡುತರ." ಹಿಂದೂಗಳ ಶಸ್ತ್ರಗಳಲ್ಲಿ ಯಂತ್ರ ಮುಕ್ತ, ಹಸ್ತಮುಕ್ತ, ಮುಕ್ತಾಮುಕ್ತಗಳೆಂದೂ, ಮುಷ್ಟಿಯಲ್ಲಿ ಹಿಡಿ ಯುವ ಶಸ್ತ್ರಗಳಲ್ಲಿ ಭಿಂದಿಪಾಲ, ತೋಮರ, ನಾರಾಚ, ಪ್ರಾಸರಿಷ್ಟಿ, ಪಟ್ಟಿಕ, ಕೃಪಣ, ಕ್ಷೇಪಣಿ, ಪಾಶಗಳೆಂದೂ ಶಸ್ತ್ರಗಳಿದ್ದವು; ಅವೀಗ ಬಳಿಕೆ ಯಲ್ಲಿಲ್ಲ. ಆಧುನಿಕ ಯುದ್ಧಶಾಸ್ತ್ರಕ್ಕೂ ಪ್ರಾಚೀನ ಯುದ್ಧಶಾಸ್ತ್ರಕ್ಕೂ ಅಸ್ತ್ರಾದಿಗಳ ವಿಷಯದಲ್ಲಿ ಬಲು ಅಭ್ಯಂತರ ಉಂಟು; ಅಸ್ತ್ರ-ಪ್ರಯೋಗದ ವಿದ್ಯೆಯು ರಾಮಾಯಣ ಭಾರತ ಕಾಲಕ್ಕೆ ಎಷ್ಟು ಮುಂದರಿದಿತ್ತೆಂಬುದು ಆಯಾ ಪುರಾಣಗಳನ್ನಷ್ಟು ನಾವು ಕೂಲಂಕಷವಾಗಿ ಓದಿದರೆ, ಸ್ಪಷ್ಟವಾಗು ವದು; ವಿಶ್ವಾಮಿತ್ರ ಋಷಿಗಳು ರಾಮ ಲಕ್ಷ್ಮಣರಿಗೆ ಅಗ್ನ್ಯಸ್ತ್ರ, ಶಿಖರಾಸ್ತ್ರ ಎಂಬವುಗಳ ಶಿಕ್ಷಣ ಕೊಟ್ಟರೆಂದು ರಾಮಾಯಣದಿಂದ ತಿಳಿಯುತ್ತದೆ; ಮೇಲಾಗಿ ಪ್ರತಿಯೊಂದು ಪುರಾಣಗಳಲ್ಲಿ ಸಾಮಾನ್ಯವಾಗಿ ವರುಣಾಸ್ತ್ರ, ಸರ್ಪಾಸ್ತ್ರ, ವಾಯುವಾಸ್ತ್ರ, ಬ್ರಹ್ಮಾಸ್ತ್ರ ಮುಂತಾದವುಗಳ ಉಲ್ಲೇಖವೂ ಕಂಡುಬರುತ್ತದೆ. ಇವುಗಳ ಮೇಲಿಂದ ಆರ್ಯರ ಅಸ್ತ್ರವಿದ್ಯೆ ಎಷ್ಟು ಸುಧಾರಿಸಿತ್ತೆಂಬುದನ್ನು ಮನಗಾಣಬಹುದು.

**ಯಂತ್ರಗಳು:**— ಯಾವುದಾದರೊಂದು ಸಾಧನದಿಂದ ಮದ್ದು ಮುಂತಾದವುಗಳನ್ನು ಹಾರಿಸುವದಕ್ಕೆ ಯಂತ್ರವೆನ್ನುವದುಂಟು; ಇಂಥ ಯಂತ್ರಗಳು ಅಯೋಧ್ಯೆಯ ಕೋಟೆಯ ಸುತ್ತುಮುತ್ತು ಏರಿಸಲ್ಪಟ್ಟಿದ್ದ ವೆಂದು ರಾಮಾಯಣದಲ್ಲಿ ಬಂದಿದೆ; ಮುಂದೆ "ಹೆಂಗಸು ನಾನಾಬಗೆಯ ಒಡವೆ ವಸ್ತ್ರಗಳಿಂದ ಅಲಂಕೃತಳಾಗಿರುವಂತೆ, ಅಯೋಧ್ಯೆಯ ದೊಡ್ಡ ದೊಡ್ಡ ಕೊತ್ತಲಗಳು ಯಂತ್ರದ ತೋಫುಗಳಿಂದ ಶೋಭಿಸುತ್ತಿದ್ದವೆಂದೂ ಬಣ್ಣಿಸಲಾಗಿದೆ; ಶತಘ್ನೀ ಎಂಬುದೊಂದು ತೋಫಿನ ಉಲ್ಲೇಖವಿದೆ; ಇದ ರಿಂದ ೩೦ ಮೈಲುಗಳವರೆಗೆ ಮದ್ದು ಹಾರುವದಲ್ಲದೆ ಒಂದೇ ಏಟಿಗೆ ೧೦೦ ಜನರು ಇದರಿಂದ ಸಾಯುತ್ತಿದ್ದರಂತೆ. ರಾಮಾಯಣದೊಳಗೆ ೧೦-೮

ಕಡೆಗೆ ಇದರ ಉಲ್ಲೇಖ ಬಂದಿದ್ದು ಇವು ಹೆಮ್ಮರಗಳ ಬೊಡ್ಡಿಯಂತೆ ಇರುತ್ತವೆಂದೂ ಗುಡುಗಿನಂತೆ ಸಪ್ಪಳವಾಗುವಂಥವು ಎಂದೂ ವರ್ಣಿಸಿರುವದರಿಂದ ಇವು ತೋಫುಗಳೇ ಎಂದೆನ್ನಲು ಅನುಮಾನವಿಲ್ಲ. ಮತ್ಸ್ಯಪುರಾಣದಲ್ಲಿ ಸಹಸ್ರ ಘಟಿ ಎಂಬುವ ಯಂತ್ರದ ಉಲ್ಲೇಖ ಉಂಟು;

**ವಿಮಾನ ವಿದ್ಯೆ:—** ಪ್ರಾಚೀನ ಹಿಂದೂಗಳಿಗೆ ವಿಮಾನದಿಂದ ಯುದ್ಧಮಾಡುವ ಕಲೆಯೂ ಗೊತ್ತಿತ್ತು; ಇದರ ಮೇಲಿಂದ ಅವರಿಗೆ ವಾಯುವಿನ ವೇಗ, ವಾತಾವರಣ ಜ್ಞಾನ, ವಾಯುವಿನ ಘನತ್ವ, ಅವೇ ಮುಂತಾದವುಗಳ ಜ್ಞಾನವಿರಲಿಕ್ಕೆ ಬೇಕೆಂದು ಸ್ಪಷ್ಟವಾಗುವದು. ಹಿಂದುಸ್ಥಾನದಲ್ಲಿಯಂತೂ ಈ ಬಗ್ಗೆ ಇದ್ದ ಪ್ರಾಚೀನ ಶಾಸ್ತ್ರವೆಲ್ಲವೂ ಮರೆತು ಹೋಗಿದೆ. ೫೦ ವರ್ಷಗಳಾಚೆ ವಿಮಾನವಿದ್ಯೆ ಅಶಕ್ಯವೆಂದು ಪಾಶ್ಚಾತ್ಯರು ಅನ್ನುತ್ತಿದ್ದರು; ಅದೀಗ ಸಾಧ್ಯವಾಗಿದೆ.

ಗ್ರೀಕರಿಗೆ ಮದ್ದು—ಗುಂಡುಗಳ ಜ್ಞಾನವಿರಲಿಲ್ಲ; ಅಷ್ಟಿಷ್ಟು ಇದ್ದರೂ ಅದನ್ನವರು ಹಿಂದೂಗಳಿಂದಲೇ ಕಲಿತುಕೊಂಡದ್ದು. ಥೆಮಿಸ್ಟಿಯಸ್ ಎಂಬುವನು ತನ್ನ ಗ್ರಂಥದಲ್ಲಿ “ ಬ್ರಾಮ್ಹಣರು ದೂರಿನಿಂದಲೇ ಶತ್ರುಗಳೊಡನೆ ಮಿಂಚಿನಿಂದಲೂ ಗುಡುಗಿನಿಂದಲೂ ಯುದ್ಧಮಾಡುತ್ತಿದ್ದರು” ಎಂದು ಬರೆದಿರುವನು. ಅಲೆಕ್ಸಾಂಡರನು ಅರಿಸ್ಟಾಟಲನಿಗೆ ಹಿಂದುಸ್ಥಾನದಿಂದ ಬರೆದ ಕಾಗದದಲ್ಲಿ “ ಹಿಂದೂಜನರು ಯುದ್ಧಪ್ರಸಂಗದಲ್ಲಿ ತನ್ನ ಸೈನಿಕರ ಮೇಲೆ ಕಿಡಿಮಳೆಗರೆದ ಸಂಗತಿಯನ್ನು ತಿಳಿಸಿರುವನು; ಅಲ್ಲದೆ, ಪಂಜಾಬದ ಮೇಲೆ ಸಿಕಂದರನು ದಾಳಿಮಾಡಿದ ಸಂಗತಿಯನ್ನು ಬರೆಯುವಾಗ ಫಾಯಲೋಸ್ಟ್ರೇಟಸ್‌ನೆಂಬ ಗ್ರೀಕನು ಅನ್ನುವದು:— ಸಿಕಂದರನು ಸಿಂಧುನದಿಯನ್ನು ದಾಟಿದ್ದರೂ ಅವನಿಗೆ ಋಷಿಗಳ ಬೀಡಾದ ಪ್ರಾಂತವು ಕೈವಶವಾಗುತ್ತಿರಲಿಲ್ಲ. ಯಾರಾದರೂ ಅಪಿತಪ್ಪಿ ಇವರ ಮೇಲೆ ದಾಳಿಯಿಟ್ಟರೆ ಸಾಕು; ಆಕಾಶದಿಂದ ಗುಡುಗು ಮಿಂಚುಗಳು ನೆಲಕ್ಕೆ ಇಳಿದು ಬಂದಂತೆ, ಏನೋ ಒಂದು ಬಗೆಯ ಅಸ್ತ್ರಗಳು ಬಂದು ಶತ್ರುಗಳನ್ನೋಡಿಸುವವು. ”

ಹಿಂದೂಜನರ ಅಸ್ತ್ರವಿದ್ಯೆಯನ್ನು ಕುರಿತು ಕರ್ನಲ್ ಆಲ್ಕಾಟರು ಬರೆಯುವದು:— ಈ ಅಸ್ತ್ರವಿದ್ಯೆಯ ವಿಷಯವಾಗಿ ಆಧುನಿಕರಿಗೇನೂ

ಇದರ ಸುಳಿವೇ ಇದ್ದಂತೆ ತೋರುವದಿಲ್ಲ. ವಾತಾವರಣವನ್ನು ವಿಷಮಯ ವಾದ ವಾಯುಗಳಿಂದ ತುಂಬಿ, ಸೈನಿಕರನ್ನು ತತ್‌ಕ್ಷಣವೇ ಕೊಲ್ಲುವಂತೆ ಮಾಡುತ್ತಿತ್ತು." ಆದರೆ ಈ ಮೋಹನಾಸ್ತ್ರದಂಥ ವಿಷಮಯ ವಾಯು ಗಳು ಈಗ ಪಾಶ್ಚಾತ್ಯರಿಗೆ ಗೊತ್ತಾಗಿವೆ.

ಹಿಂದೂ ಸೇನಾನಿಗಳ ಸದ್ಗುಣವನ್ನು ಕುರಿತು ಅನೇಕ ಪಾಶ್ಚಾತ್ಯ ಸೇನಾಪತಿಗಳು ಹೊಗಳಿರುವರು. ಅವರಲ್ಲಿ ಕೆಲವರ ಅಭಿಪ್ರಾಯಗಳನ್ನು ಕೊಡುವೆವು.

**ಸರ ಚಾರ್ಲಸ್ ನೇಪಿಯರ:—** ಗಾಂಭೀರ್ಯ, ಧೈರ್ಯ, ಮುಂತಾದ ಸೇನಾನಿಯ ಗುಣಗಳಲ್ಲಿ ಹಿಂದೂಗಳಿಗಿಂತ ಮೇಲಾದವರನ್ನು ನಾನೆಲ್ಲಿಯೂ ನೋಡಲಿಲ್ಲ. ನನ್ನ ಕೈಯಲ್ಲಿಯೇ ಇಂಥ ಅನೇಕ ವೀರರು ಕೆಲಸಮಾಡಿ ಹೋದರು.

ಕ್ಲೈವನು ಅರ್ಕಾಟವನ್ನು ಮುತ್ತಿದಾಗಲೂ, ಟೀಪುವಿನೊಡನೆ ಜನರಲ್ ಮ್ಯಾಥ್ಯೂ ಅವರು ಯುದ್ಧ ಹೂಡಿದಾಗಲೂ ಬ್ರಿಟಿಶ ದಂಡಿನವ ರೆಲ್ಲರೂ ಶತ್ರುಗಳ ಕೈಗೆ ಸಿಕ್ಕು ಸೆರೆಯಾಳಾಗಿರಲು, ಬ್ರಿಟೀಶರಲ್ಲಿದ್ದ ಹಿಂದೂ ದಂಡಿನವರು ತಮ್ಮ ಅನ್ನವನ್ನೆಲ್ಲ ಸೆರೆಸಿಕ್ಕ ಸೆರೆಯಾಳುಗಳಿಗೆ ಕೊಟ್ಟು ತಮಗೆ ಗಂಜಿಯೇ ಸಾಕೆಂದು ಹಟ ಹಿಡಿದಿದ್ದುದನ್ನು ನೋಡಿದರೆ ಅವರ ಮನಸು ಎಷ್ಟು ದೊಡ್ಡದಿತ್ತೆಂಬುದು ವ್ಯಕ್ತವಾಗುತ್ತದೆ.

**ಜನರಲ್ ಊಲ್ಸ್ಲೀಯವರು:—** "ಹಿಂದೂ ಸಿಪಾಯಿಗಳ ಶೌರ್ಯವು ಅವರ್ಣನೀಯವಿದ್ದು ಅವರು ಎದೆಗಾರಿಕೆಯ ಹಲವು ಪರಾಕ್ರಮ ಗಳನ್ನು ಮಾಡಿರುವರು" ಎಂದು ಹೊಗಳಿದ್ದಾರೆ.

---

# ೧೦ ನೆಯ ಪ್ರಕರಣ.

---

## ಭೌತಿಕ ಶಾಸ್ತ್ರಗಳ ಬೆಳವಣಿಗೆ

**ಆಯುರ್ವೇದದವರು ಇಂಥದೊಂದು ವಿಷಯದ ಬಗ್ಗೆ ಚರ್ಚೆ ಮಾಡಿಲ್ಲವೆಂದು ಹೇಳಲಿಕ್ಕಾಗದು; ಶರೀರ, ಇಂದ್ರಿಯ, ಅವಯವ, ರಕ್ತನಾಳ, ಗ್ರಂಥಿ, ಕೋಶ, ಇವೆಲ್ಲವುಗಳ ಬಗ್ಗೆ ಒಡೆದು ವಿಂಗಡಿಸಿ ಹೇಳಿದ್ದಾರೆ; ಹಿಂದೂ ಜನರು ವನಸ್ಪತಿ ಔಷಧಗಳಲ್ಲಿ ವನಸ್ಪತಿ, ಧಾತು, ಪ್ರಾಣಿ ಮುಂತಾದವುಗಳನ್ನು ಸೇರಿಸಿದ್ದಾರೆ; ಅವುಗಳಲ್ಲಿ ಕೆಲವುಗಳನ್ನು ಪಾಶ್ಚಿಮಾತ್ಯರು ಕೂಡ ಎತ್ತಿಕೊಂಡಿದ್ದಾರೆ.”**

**—ಸರ ವಿಲಿಯಂ ಹಂಟರರು.**

**ಆಯುರ್ವೇದ ಶಾಸ್ತ್ರ:—** ತತ್ವಶಾಸ್ತ್ರ, ಧರ್ಮಶಾಸ್ತ್ರ, ಯೋಗಶಾಸ್ತ್ರ, ಭಾಷಾಶಾಸ್ತ್ರಗಳಂತೆ ಭೌತಿಕ ಶಾಸ್ತ್ರಗಳಲ್ಲಿಯೂ ಆರ್ಯರು ಅತ್ಯಂತ ಘನತೆಯನ್ನು ಪಡೆದಿದ್ದರು; ಆರ್ಯರ ವನಸ್ಪತಿ ಶೋಧನೆಯ ಬಲ, ಅದರ ಪೃಥಃಕರಣ ಹಾಗೂ ಯೋಜನೆಯ ದೀರ್ಘ ಪ್ರಯತ್ನ, ಶ್ರಮ-ಸಾತತ್ಯ, ಇವೆಲ್ಲವುಗಳನ್ನು ನೋಡಿದರೆ, ಅವರು ಮಾಡಿರುವ ಶಮಕ್ಕೆ ಬೆಲೆಯಿಲ್ಲ; ಆರ್ಯರು ವೈದ್ಯಶಾಸ್ತ್ರದಲ್ಲಿ ಬೇರೆ ಶಾಸ್ತ್ರಗಳಂತೆಯೇ ಹಿರಿದಾದ ಜಾಣೆಯನ್ನು ತೋರ್ಪಡಿಸಿದ್ದಾರೆ; ಆದರೂ ಅವರು ಎಷ್ಟರಮಟ್ಟಿಗೆ ಕೆಲಸ ಮಾಡಿರುವರೆಂಬುದನ್ನು ನೋಡಬೇಕೆಂದರೆ ಆರ್ಯವೈದ್ಯಕದ ಗ್ರಂಥರಾಶಿಯನ್ನೇ ಶೋಧಿಸಲಿಕ್ಕೆ ಬೇಕೇ ಹೊರ್ತು ಬೇರೇ ಗತಿಯಿಲ್ಲ; ನಮ್ಮಲ್ಲಿಯ ಅರ್ವಾಚೀನ ವೈದ್ಯತತ್ವಜ್ಞರೂ, ಪಾಶ್ಚಿಮಾತ್ಯ ಸಂಶೋಧಕರೂ ಇತ್ತಿತ್ತ ನಮ್ಮ ಪುರಾತನ ಗ್ರಂಥರಾಶಿಯನ್ನೋದಿ ಅದರ ಬಗ್ಗೆ ಸಾಕಷ್ಟು ಧನ್ಯೋದ್ಗಾರಗಳನ್ನು ತೆಗೆದಿದ್ದಾರೆ; ಜಗತ್ತಿನಲ್ಲಿಯ ಪದ್ಧತಿಗಳಲ್ಲಿ ಆಯುರ್ವೇದವು ಅತ್ಯಂತ ಹಳೆಯದು; ಧನ್ವಂತರಿ ಎಂಬ ಪುರಾತನ ವೈದ್ಯ ಶಿಖಾಮಣಿಯು ಸುಶ್ರುತನೆಂಬ ತನ್ನ ಶಿಷ್ಯನಿಗೆ ಇದರ ಜ್ಞಾನವ ನೀಡಿಕೊಟ್ಟನು; ಸುಶ್ರುತನು ಶರೀರಶಾಸ್ತ್ರ, ಹಾಗೂ ಶಸ್ತ್ರ ಚಿಕಿತ್ಸೆಯ ಬಗ್ಗೆ ಪುಸ್ತಕಗಳನ್ನು ಬರೆ

ದಿರುವನು. ಚರಕಾಚಾರ್ಯನು ಚರಕವೆಂಬ ವನಸ್ಪತಿ ಗುಣದೋಷ ತಿಳಿಸುವ ಗ್ರಂಥದಲ್ಲಿ ತನಗೆ ಈ ವಿದ್ಯೆಯು ಅಗ್ನಿವೇಶ ಮುನಿಯಿಂದಲೂ, ಆತನಿಗೆ ಆತ್ರೇಯ ಮುನಿಯಿಂದಲೂ ಪ್ರಾಪ್ತವಾಯಿತೆಂದು ಬರೆದಿರುವನು; ಮದ್ರಾಸ ಸರಕಾರದ ಲಾರ್ಡ ಆ್ಯಂಪಥಿಲ್ಲರು ಮದ್ರಾಸ ಕಿಂಗ ಇನ್‌ಸ್ಟಿಟವನ್ನು ತೆರೆಯುವಾಗ ಮಾಡಿದ ಭಾಷಣದಲ್ಲಿ "ಹಿಂದೂಜನರೇ ಮೊದಲು ಆಯುರ್ವೇದವನ್ನು ನಿರ್ಮಿಸಿದರು; ಅದನ್ನೇ ಮುಂದೆ ಅರಬರು ಎತ್ತಿಕೊಂಡರು; ನಂತರ ಈ ಶಾಸ್ತ್ರವು ಅರಬರಿಂದ ಯುರೋಪಕ್ಕೆ ಹೋಯಿತು; ೧೭ ಶತಮಾನದ ವರೆಗೆ ಯುರೋಪಿಯ ವೈದ್ಯರು ಅರಬರಗ್ರಂಥ ಹಾಗೂ ವೈದ್ಯರಿಂದಲೇ ವೈದ್ಯಶಾಸ್ತ್ರ ಕಲಿತರು. ಈ ಮೇರೆಗೆ ಪೂರ್ವದ ಜ್ಞಾನವು ಪಶ್ಚಿಮಕ್ಕೆ ಹರಿಯಿತು; ಹಿಂದೂಶಾಸ್ತ್ರದಲ್ಲಿಯೂ ಆರೋಗ್ಯಶಾಸ್ತ್ರದ ನಿಯಮಗಳಿದ್ದೇ ಅವೆ. ಮನುವು ಆರೋಗ್ಯ ಸುಧಾರಕನಿದ್ದನು."ಎಂದಿರುವರು. ಸಂಸ್ಕೃತ ವೈದ್ಯಕ ಗ್ರಂಥಗಳು ಬಹು ಮಟ್ಟಿಗೆ ಅರಬರಿಂದ ಭಾಷಾಂತರಿಸಲ್ಪಟ್ಟವೆಂಬುದನ್ನು ಕುರಿತು ಬೇರೆ ಬೇರೆ ಜನರು ಕೆಳಗಿನಂತೆ ಅಭಿಪ್ರಾಯ ಪಡುವರು:—

**ಸರ ಡಬ್ಲ್ಯು ಹಂಟರರು**:— ಅರಬರ ವೈದ್ಯಶಾಸ್ತ್ರವು ಹಿಂದೂ ಆಯುರ್ವೇದದಿಂದಲೇ ಎತ್ತಲ್ಪಟ್ಟಿದ್ದು, ಬಗದಾದ ಖಲೀಫನು ೯೫೦–೯೬೦ ಕ್ರಿ. ಶ. ವರೆಗೆ ತನ್ನ ಆಜ್ಞೆಯಿಂದ ಸಂಸ್ಕೃತ ವೈದ್ಯಕೀಯ ಗ್ರಂಥಗಳನ್ನು ಭಾಷಾಂತರಿಸಲಿಕ್ಕೆ ತನ್ನಲ್ಲಿರುವ ವಿದ್ವಾಂಸರನ್ನು ನಿಯಮಿಸಿದ್ದನು; ಅದನ್ನೇ ಮುಂದೆ ಯುರೋಪಿಯರು ಎತ್ತಿದರು; ಇಂದಿಗೂ ಲ್ಯಾಟಿನ್ ಭಾಷಾಂತರಗಳಲ್ಲಿ ಚರಕನ ಹೆಸರು ಕಂಡು ಬರುತ್ತದೆ."

ಅಲಮಂಝುರ ಎಂಬೊಬ್ಬ ಅರಬರ ಅರಸನು ಡಮಾಸ್ಕಸದಿಂದ ಬಗದಾದಕ್ಕೆ ತನ್ನ ರಾಜಧಾನಿಯನ್ನು ಇ. ಸ. ೭೫೩–೭೭೪ ರಲ್ಲಿ ಒಯ್ದನು; ತನ್ನಲ್ಲಿಯ ವಿದ್ವಾಂಸರಿಂದ ಈತನು ಚರಕ–ಸುಶ್ರುತ ಗ್ರಂಥಗಳನ್ನು ಭಾಷಾಂತರ ಮಾಡಿಸಿದನು. ಬಗದಾದದ ಅರಸನಾದ ಹರೂನ-ಉಲ್-ರಸೀದನು ತನ್ನ ಆಳಿಕೆಯಲ್ಲಿ ಹಿಂದೂವೈದ್ಯರನ್ನು ತನ್ನಲ್ಲಿಗೆ ಕರೆಯಿಸಿ ಮರ್ಯಾದೆಯಿಂದಿಟ್ಟುಕೊಂಡು ಅವರಿಂದ ಬೇಕಾದ ಸಂಗತಿ ತಿಳಿದುಕೊಳ್ಳುತ್ತಿದ್ದನೆಂದೂ ಅನೇಕ ಗ್ರಂಥಕಾರರು ಬರೆದಿಟ್ಟಿರುವರು. ಮಂಕಾ ಎಂಬೊಬ್ಬ ಹಿಂದು

ವೈದ್ಯಶಾಸ್ತ್ರಜ್ಞನು ಹಾಗೂ ಪಂಡಿತನು ಹಿಂದುಸ್ಥಾನದಿಂದ ಇರಾಣಕ್ಕೆ ಹೋಗಿ ಖಲೀಫಹರೂನ-ಉಲ್-ರಶೀದನ ಬೇನೆಯನ್ನು ಗುಣ-ಪಡಿಸಿದನೆಂದೂ, ಚರಕಾಚಾರ್ಯರ ಗ್ರಂಥವನ್ನು ಸಂಸ್ಕೃತದಿಂದ ಪಾರ್ಸಿ ಭಾಷೆಯಲ್ಲಿ ಭಾಷಾಂತರಿಸಿ ಕೊಟ್ಟನೆಂದೂ ಅಬು ಓಸಾಯಬಾ ಎಂಬ ಪಾರ್ಸಿ ಗ್ರಂಥಕರ್ತನು ಬರೆದಿಟ್ಟಿರುವನು. ಗ್ರೀಕರು ಹಿಂದೂಗಳಿಂದಲೇ ತ್ರಿಫಳಾ (ಅರಳೆಕಾಯಿ ತಾರೀಕಾಯಿ ನೆಲ್ಲಿಕಾಯಿ) ಚೂರ್ಣದ ಉಪಯೋಗವನ್ನು ಕಲಿತುಕೊಂಡರು; ಅವರಿಗೆ ಮೊತ್ತಮೊದಲು ಹಾವು ಕಡಿತಕ್ಕೆ ಔಷಧವೇ ಗೊತ್ತಿರಲಿಲ್ಲ; ಹಿಂದೂವೈದ್ಯರಿಗೆ ಇದು ಗೊತ್ತಿತ್ತು; ಸಿಕಂದರನು ಹಿಂದುಸ್ಥಾನಕ್ಕೆ ಬಂದಾಗ ಅದನ್ನು ತಿಳಿದುಕೊಂಡು ಹೋದುದರಿಂದ ಹಾವು ಕಚ್ಚಲ್ಪಟ್ಟವರೆಲ್ಲರೂ ಸಿಕಂದರನ ಓಲಗಕ್ಕೆ ಹೋಗಿ ಔಷಧ ಹಚ್ಚಿಕೊಂಡು ಹೋಗುತ್ತಿದ್ದರಂತೆ!

**ಶಸ್ತ್ರಚಿಕಿತ್ಸೆ:—** ಸಾವಿರಾರು ವರ್ಷಗಳಾಚೆ ಕೂಡ ಆರ್ಯರು ಶಸ್ತ್ರಚಿಕಿತ್ಸೆಯನ್ನೇ ಕುರಿತು ಒಂದು ದೊಡ್ಡ ಗ್ರಂಥವನ್ನು ಬರೆದಿದ್ದು, ಈಗ ಪಾಶ್ಚಾತ್ಯರು ಬಳಿಕೆಯಲ್ಲಿ ತರುವ ಎಲ್ಲ ವಿಧದ ಶಸ್ತ್ರಗಳ ಉಲ್ಲೇಖವು ಆ ಗ್ರಂಥದೊಳಗೆ ದೊರೆಯುತ್ತದೆ. ಈ ಬಗ್ಗೆ

**ಪ್ರೊ. ವಿಲ್ಸನ್ನರು ಅನ್ನುವದು:—** ಹಿಂದೂಗಳು ಔಷಧ ಚಿಕಿತ್ಸೆಯಲ್ಲಿ ಹೇಗೋ ಹಾಗೆ ಶಸ್ತ್ರಚಿಕಿತ್ಸೆಯಲ್ಲಿಯೂ ಪ್ರಾವೀಣ್ಯವನ್ನು ಪಡೆದವರಾಗಿದ್ದರು."

**ಮಿ. ವೆಬರರು:- "ಯುರೋಪಿಯ ಶಸ್ತ್ರಚಿಕಿತ್ಸಕರು ಇಂದಿಗೂ ಹಿಂದುಸ್ಥಾನದ ಪುರಾತನ ಶಸ್ತ್ರವಿದ್ಯೆಯಿಂದ ಕಲಿಯತಕ್ಕದ್ದು ಬೇಕಾದಷ್ಟಿದೆ. ಹೊಸ ಮೂಗು-ಕಿವಿಗಳನ್ನು ಕೂಡ ಹಿಂದೂ ಜನರು ಕೃತ್ರಿಮ ರೀತಿಯಿಂದ ಮಾಡಿ ಹಾಕುತ್ತಿದ್ದರು."**

**ಪ್ರೊ. ಮ್ಯಾಕ್‌ಡೋನೆಲ್ಲರು:—** ಕೃತ್ರಿಮ ಮೂಗುಗಳನ್ನು ಮಾಡುವ ಕಲೆಯನ್ನು ಯುರೋಪಿಯರು ಹಿಂದೂ ಜನರಿಂದಲೇ ಕಲಿತಿರುವರು; ಆ ಮೇಲೆ ಅದು ಕಳೆದ ಶತಮಾನದಿಂದ ಯುರೋಪದಲ್ಲಿ ಬಳಿಕೆಯಾಯಿತು."

**ಮಿ. ಎಲ್‌ಫಿನ್‌ಸ್ಟನ್ನರು:—** " ಹಿಂದೂಗಳ ಶಾಸ್ತ್ರಗಳು ಕೂದ

ಲೆಳೆಯನ್ನು ಕೂಡ ಇಬ್ಭಾಗ ಮಾಡುವಷ್ಟು ಹರಿತ ಹಾಗೂ ಸೂಕ್ಷ್ಮವಿರುತ್ತಿದ್ದವು."

**ಡಾ. ಹಂಟೆರರು:—** ಹಿಂದೂಜನರು ತಮ್ಮ ಶಸ್ತ್ರಚಿಕಿತ್ಸೆಯ ಜಾಣತನದಿಂದ ಜೀವಾಳದ ಭಾಗಗಳನ್ನು ಕೊಯ್ದು ನೆಟ್ಟಗೆ ಮಾಡುತ್ತಿದ್ದರು. ರಕ್ತಪ್ರವಾಹವನ್ನು ನಿಲ್ಲಿಸುತ್ತಿದ್ದರು; ಹೊಟ್ಟೆ, ಕರಳು, ಹಾಗೂ ಗರ್ಭಾಶಯದಂಥ ಸೂಕ್ಷ್ಮ ಭಾಗಗಳ ಬೇನೆಗಳಲ್ಲಿ ಲೀಲೆಯಿಂದಲೂ ನಿರ್ಭಯದಿಂದಲೂ ಶಸ್ತ್ರಚಿಕಿತ್ಸೆ ನಡಿಸುತ್ತಿದ್ದರು; ಮುರಿದ ಎಲಬು ಸರಿಪಡಿಸಿ ಸಂಧಿತಪ್ಪಿದ ಎಲಬುಗಳನ್ನು ಸರಿಯಾಗಿ ಇದ್ದಕ್ಕಿದ್ದಂತೆ ಕೂಡಿಸುತ್ತಿದ್ದರು.

ಹಿಂದೂಗಳ ಶಸ್ತ್ರಗಳು ಒಟ್ಟಿಗೆ ಸುಮಾರು ೧೨೭ ಇದ್ದು ಅವುಗಳಲ್ಲಿ ಗರ್ಭಾಶಯದಿಂದ ಕೂಸುಗಳನ್ನು ಹೊರತೆಗೆಯುವದರಲ್ಲಿಯೂ ಅವರು ಒಳ್ಳೇ ನಿಪುಣರಿದ್ದರು.

**ರಸಶಾಸ್ತ್ರ:—** ರಸಾಯನ ಶಾಸ್ತ್ರವು ಹಿಂದೂಗಳ ವೈಶಿಷ್ಟ್ಯವೆಂದು ಈಗಲೂ ಹೊಗಳಲ್ಪಡುತ್ತಿದೆ; ಈಗಿನಂಥ ಸುಧಾರಿಸಿದ ಕಾಲದಲ್ಲಿ ಕೂಡ ರಸಾಯನದೊಳಗೆ ಹಿಂದೂಗಳು ಹೇಗೆ ಧೈರ್ಯದಿಂದ ಅಡಿಯಿಡುವರೋ ಹಾಗೆ ಯಾರಿಗೂ ಎದೆಯಾಗದು. ಈ ವಿಷಯವನ್ನು ಕುರಿತು **ಮಿ. ಎಲ್‌ಫಿನ್ಸ‌ಟೆನ್ನರು ಬರೆಯುವದು:—** ಹಿಂದೂಗಳ ರಸಶಾಸ್ತ್ರ ಕೌಶಲ್ಯಕ್ಕಂತೂ ಎಣೆಯಿಲ್ಲ; ಅವರಿಗೆ ಈಗಿನ ಸಲ್ಫೆರಿಕ್ ಅಸಿಡ್, ನೈಟ್ರಿಕ ಆಸಿಡ್, ಮ್ಯುರೇಟಿಕ್ ಆಸಿಡ್, ಆಕ್ಸಾಯಿಡ್ ಆಫ ಕಾಪರ, ಆಯರ್ನ ಲೆಡ್, ಟಿನ್ ಮತ್ತು ಝಿಂಕ, ಸಲ್ಫೈಟ ಆಫ್ ಕಾಪರ, ಝಿಂಕ, ಆಯರ್ನ, ಕಾರಬೊನೇಟ್ಸ ಆಫ್ ಲೆಡ್ಡ-ಆಯರ್ನ ಮುಂತಾದವುಗಳಿಂದ ಔಷಧ ಮಾಡುವದು ಗೊತ್ತಿತ್ತು; ಧಾತುಗಳನ್ನು ರಸಾಯನ ರೂಪದಿಂದ ಹೊಟ್ಟೆಯೊಳಗೆ ಕೊಡಲು ಯತ್ನಿಸಿದವರಲ್ಲಿ ಜಗತ್ತಿನಲ್ಲೆಲ್ಲ ಹಿಂದೂಗಳೇ ಮುಂದಾಳುಗಳು.

**ಬಂಗಾಲದ ಸರ ಪ್ರಫುಲ್ಲಚಂದ್ರರಾಯ:—** ಹಿಂದೂ ರಸಾಯನದ ಇತಿಹಾಸವೆಂಬುದೊಂದು ಪುಸ್ತಕ ಬರೆದಿದ್ದು ಅದು ಜಗನ್ಮಾನ್ಯವಾಗಿದೆ; ಅದರಲ್ಲಿ ರಾಯರು ಬರೆಯುವದು:— ರಸಾಯನ ಶಾಸ್ತ್ರವಾದರೂ

ಪೂರ್ವದೇಶದಿಂದಲೇ ಪಶ್ಚಿಮದೇಶಕ್ಕೆ ಹೋಯಿತು. ರಸರತ್ನ ಸಮುಚ್ಚಯ ವೆಂಬ ಗ್ರಂಥವಂತೂ ವನಸ್ಪತಿ ಗುಣದೋಷ, ವನಸ್ಪತಿ ಔಷಧ ಚಿಕಿತ್ಸೆ, ಹಾಗೂ ಅವುಗಳನ್ನು ಸಿದ್ಧಪಡಿಸುವ ಕ್ರಮಗಳನ್ನು ಕುರಿತು ಬರೆದಿರುವ ಕ್ರಮಬದ್ಧ ಗ್ರಂಥವಾಗಿದೆ. ಇದರಲ್ಲಿ ಎಲ್ಲ ವಿಷಯವೂ ಸಾರವಾಗಿ ಹೇಳಲ್ಪಟ್ಟಿದೆ. ನಾಗಾರ್ಜುನ ಬೋಧಿಸತ್ವನೆಂಬುವನು ಈ ತರದ ರಸಾಯನ ಕ್ರಿಯೆಯಲ್ಲಿ ಅತ್ಯಂತ ಪ್ರವೀಣನಿದ್ದನು; ಈತನು ಗಿಡ ಮೂಲಿಕೆಗಳಿಂದ ಸಿದ್ಧಪಡಿಸಿದ ಒಂದು ಗುಳಿಗೆಯನ್ನು ನುಂಗಿ ಸಾವಿರಾರು ವರ್ಷಗಳವರೆಗೆ ತಿನ್ನದೆ–ಉಣ್ಣದೆ, ಸೊರಗದೆ–ಸವೆಯದೆ ಗಟ್ಟಿಯಾಗಿರುತ್ತಿದ್ದನೆಂದೂ, ಸಾತವಾಹನ ರಾಜನು ಈ ಔಷಧ ತೆಗೆದು ಕೊಂಡಿದ್ದನೆಂದೂ ಬೌದ್ಧ ಗ್ರಂಥಗಳಿಂದ ತಿಳಿಯಬರುತ್ತದೆ.

**ರೋಗಪ್ರತಿಬಂಧಕ ಉಪಾಯ ಹಾಗೂ ವ್ಹೈಲಿ ಚುಚ್ಚುವದು:–** ಈ ಬಗ್ಗೆ ಕರ್ನಲ್ ಕಿಂಗ ಎಂಬುವರು ಅನ್ನುವದು:– ಹಿಂದೂಗಳ ಜಾತಿಯ ವರ್ಗೀಕರಣವು ರೋಗಪ್ರತಿಬಂಧಕಕ್ಕೆ ಬಹು ಅನುಕೂಲವಿರುವದು; ಮತ್ತು ರೋಗಗಳು ಹರಡಬಾರದೆಂಬ ತತ್ವವನ್ನೇ ಮೂಲವಾಗಿಟ್ಟು ಕೊಂಡು ಪುರಾತನ ಆರ್ಯರು ಜಾತಿಭೇದವನ್ನು ಕಲ್ಪಿಸಿದರೆಂದು ಕಾಣುತ್ತದೆ; ಮಿ. ಜೇನರರು ತಮ್ಮ ವ್ಹೈಲಿಯ ರಸವನ್ನು ಹುಡುಕಿ ತೆಗೆಯುವ ಮೊದಲು ಹಿಂದೂಗಳು ವ್ಹೈಲೀ ಚುಚ್ಚುವ ಕಲೆಯನ್ನರಿತವರಾಗಿದ್ದರು; ಕ್ರಿಸ್ತ ಶಕದ ಪ್ರಾರಂಭಕ್ಕೇ ಈ ಕಲೆಯು ಹಿಂದುಸ್ಥಾನದಲ್ಲಿ ಪ್ರಚಾರದಲ್ಲಿದ್ದು ಇಲ್ಲಿಂದಲೇ ಅದು ಪಶ್ಚಿಮ ಖಂಡಕ್ಕೆ ಹೋಯಿತು. ಪ್ರಾಚೀನ ಆರ್ಯರು ವ್ಹೈಲಿಗಾಗಿ ಚುಚ್ಚುವ ರಸವನ್ನು ಆಕಳಿನಿಂದ ತೆಗೆದುಕೊಳ್ಳುತ್ತಿದ್ದರು. ಈ ಬಗ್ಗೆ ಧನ್ವಂತರಿಯೆಂಬ ಪ್ರಾಚೀನ ಋಷಿಯು ತನ್ನ ಗ್ರಂಥದಲ್ಲಿ ಅನ್ನುವದು:–ಆಕಳ ಕೆಚ್ಚಲೊಳಗಿನ ಸಿಡುಬಿನ ಬಕ್ಕೆಯಲ್ಲಿಯ ರಸವನ್ನಾಗಲಿ, ಮನುಷ್ಯನ ಮೊಳಕೈ ಅಥವಾ ಬಗಲೊಳಗಿನ ರಸವನ್ನಾಗಲಿ ತೆಗೆದುಕೊಂಡು ಅದನ್ನು ಮನುಷ್ಯ ರಕ್ತದೊಡನೆ ಬೆರೆಸಿದರೆ ವ್ಹೈಲಿಯ ರಸವು ಸಿದ್ಧವಾಗುವದು. ಈ ಪದ್ಧತಿಯ ವ್ಹೈಲಿಯು ಅತ್ಯಂತ ಸುಲಭವೂ ಶುದ್ಧವೂ ಇರುವದು. ಮಿ. ಜೇನರನು ಇಲ್ಲಿಂದಲೇ ತನ್ನ ಶೋಧವನ್ನು ಮುನ್ನಡಿಸಿದನು. ಇನಾಕ್ಯುಲೇಶನ್ನ ಪದ್ಧತಿಯೂ ಆರ್ಯರಿಗೆ ಹೊಸ

ದಲ್ಲ. ಪ್ಲೇಗವನ್ನು ಪ್ರತಿಬಂಧಿಸಲು ಸ್ಥಳಾಂತರ ಮಾಡುವದು, ಮನೆ ಶುದ್ಧಪಡಿಸುವದು ಇವಂತೂ ಹಿಂದೂಶಾಸ್ತ್ರಗಳಲ್ಲಿಯ ಮೂಲತತ್ವಗಳಾಗಿವೆ.

**ಸಾರ್ವಜನಿಕ ಆಸ್ಪತ್ರೆಗಳ ಕಲ್ಪನೆಗೂ ಹಿಂದುಸ್ಥಾನವೇ ತೌರುಮನೆ:**— ಎಲ್ಲಕ್ಕೂ ಮೊದಲು ಜಗತ್ತಿನಲ್ಲಿ ಸಾಮಾನ್ಯ ಜನರಿಗಾಗಿ ಆಸ್ಪತ್ರೆಗಳನ್ನಿಡಬೇಕೆಂಬುವ ಕಲ್ಪನೆಯು ಹಿಂದುಸ್ಥಾನದಲ್ಲಿಯೇ ಹುಟ್ಟಿತು; ಮತ್ತು ಈ ಕಲ್ಪನೆಯನ್ನು ಸಾವಿರಾರು ವರ್ಷಗಳಾಚೆ ಆರ್ಯರೇ ಕೃತಿಯಲ್ಲಿ ತಂದರು. ಪಾಟಲೀಪುತ್ರ (ಪಾಟಣಾ) ದಲ್ಲಿದ್ದ ಒಂದು ಸಾರ್ವಜನಿಕ ಆಸ್ಪತ್ರೆಯ ಬಗ್ಗೆ ಚೀನ ಪ್ರವಾಸಿಯಾದ ಫಾಹಿಯಾನನು ಬರೆಯುವದು:— ಈ ಆಸ್ಪತ್ರೆಗೆ ಎಲ್ಲ ದೇಶಗಳಿಂದ ಅನಾಥರಾದ ರೋಗ ಪೀಡಿತರೂ ಬಂದು ಮುಕ್ಕುರುವರು. ಅವರನ್ನು ವೈದ್ಯರು ಬಹು ಅಂತಃಕರಣದಿಂದ ಉಪಚರಿಸುವರು; ಮತ್ತು ಅವರಿಗೆ ಔಷಧ—ಅನ್ನ ಮುಂತಾದವುಗಳನ್ನು ಧರ್ಮಾರ್ಥವಾಗಿ ಒದಗಿಸುವರು; ನೆಟ್ಟಗಾದ ಮೇಲೆ ಅವರು ತಮ್ಮ ತಮ್ಮ ಮನೆಗಳಿಗೆ ಹೋಗುವರು."

**ಡಾ. ಶೀಯರು ಅನ್ನುವದು**:— ಬುದ್ಧ ಕಾಲದಲ್ಲಿ ಅಂತೂ ಹಿಂದುಸ್ಥಾನವು ಹಲವು ಆಸ್ಪತ್ರೆ ಹಾಗೂ ಔಷಧಾಲಯಗಳಿಂದ ತುಂಬಿ ತುಳುಕುತ್ತಿದ್ದಿತು;

ಯುರೋಪದಲ್ಲಿಯ ಮೊದಲನೇ ಆಸ್ಪತ್ರೆಯು ೧೦ ನೇ ಶತಮಾನ ದಲ್ಲಿ ಆಯಿತೆಂದು ಮಿ. ಸ್ಮಿಥರು ಅಭಿಪ್ರಾಯಪಡುತ್ತಾರೆ.

**ಪಶು-ಚಿಕಿತ್ಸೆ:**— ಆರ್ಯರು ಮನುಷ್ಯರೋಗ ಚಿಕಿತ್ಸೆಯಲ್ಲಿ ತಮ್ಮ ಬುದ್ಧಿಯನ್ನು ಉಪಯೋಗಿಸಿ, ಅದರ ಬಗ್ಗೆ ಅನೇಕ ಚಿಕಿತ್ಸೆ, ನಿದಾನಗಳನ್ನು ಕಲ್ಪಿಸಿರುವಂತೆ, ಪಶುಚಿಕಿತ್ಸೆಯ ವಿಷಯದಲ್ಲಿಯೂ ಚನ್ನಾಗಿಯೇ ಬೆಳವಣಿಗೆ ಮಾಡಿದ್ದರು. ಪಶುಚಿಕಿತ್ಸೆಯ ಬಗ್ಗೆ ಸಂಸ್ಕೃತದಲ್ಲಿಯೂ ಕನ್ನಡದಲ್ಲಿಯೂ ಅನೇಕ ಹಳೆಯ ಗ್ರಂಥಗಳಿವೆ; ಈ ಬಗ್ಗೆ ಪ್ರೊ. ವೆಬರ ಎಂಬುವರು ಅನ್ನುವದು:— ವೈದಿಕ ಕಾಲದಲ್ಲಿ ಆರ್ಯರಿಗೆ ಪಶು—ಶರೀರ ಶಾಸ್ತ್ರವು ಕೂಡ ಗೊತ್ತಿತ್ತು; ಶರೀರದ ಬೇರೆ ಬೇರೆ ಭಾಗಗಳಿಗೆ ಸಹ ಅವರು ಹೆಸರು ಕೊಟ್ಟಿದ್ದರು;"

**ಮಿ. ಇಳಿಯಟರು ಅನ್ನುವದು:—** ಲಖನೌ ರಾಯಲ್ ಲಾಯಬ್ರರಿಯಲ್ಲಿ ಈಗ್ಯೂ ಪಶುಚಿಕಿತ್ಸೆಯ ಸಂಬಂಧವಾಗಿ ಒಂದು ಗ್ರಂಥವಿರುವದು. ಅದನ್ನು ಖಿಲಜಿ ವಂಶದ ಗ್ಯಾಸುದ್ದೀನ ಮಹಮ್ಮದಶಹನು ಸಂಸ್ಕೃತಕ್ಕೆ ಭಾಷಾಂತರಿಸಿದನೆಂದು ಬರೆಯಲ್ಪಟ್ಟಿದೆ.

ಈ ಪುಸ್ತಕದಲ್ಲಿ ಕುದುರೆಯ ಜಾತಿಗಳು ಮತ್ತು ಹೆಸರುಗಳು; ಅವುಗಳನ್ನು ಕಾಪಾಡುವದು, ಹತ್ತುವದು, ಅವುಗಳ ವಾಸನೆ, ಕುದುರೆಯ ಲಾಯವನ್ನು ಇಡುವ ಬಗೆ, ಲಾಯವನ್ನು ಕಟ್ಟುವ ಬಗೆ, ಹಲ್ಲಿನಿಂದ ಕುದುರೆಯ ವಯಸ್ಸು ತಿಳಿಯುವದು, ಅವುಗಳ ಆಹಾರ, ಅವು ಬಳಲಿಯ ಬೇಕಾದರೆ ಹಾಕುವ ಅನ್ನ, ಅವುಗಳಿಗೆ ಯಾವ ತರದ್ದಾದರೂ ಬೇನೆ ಬಂದರೆ ಉಪಚಾರ ಮಾಡುವ ಬಗ್ಗೆ ಅನೇಕ ಸೂಚನೆಗಳನ್ನು ಹೇಳಿರುವದು.

**ಗಣಿತಶಾಸ್ತ್ರ:—** ಬುದ್ಧಿ ಕೌಶಲ್ಯದಲ್ಲಿ ಹಿಂದೂಜನರು ಜಗತ್ತಿನೊಳಗಿನ ಯಾವ ಜನಾಂಗದವರಿಗೂ ಸರಿಯಿಲ್ಲ; ಅವರ ಬುದ್ಧಿಯು ಎಷ್ಟು ಪಕ್ವವಿದೆನ್ನಲಿಕ್ಕೆ ಅವರ ವಾಙ್ಮಯಶಾಸ್ತ್ರದ ಬೆಳವಣಿಗೆಯೇ ಸಾಕಷ್ಟು ಬಲವಾದ ಆಧಾರವಿದೆ. ಬೌದ್ಧಿಕ ಕೆಲಸಗಳಿಗೆ ಮುಖ್ಯವಾಗಿ ಏಕಾಗ್ರಚಿತ್ತದ ಬಲವಿರಲಿಕ್ಕೆಬೇಕು; ಈ ಗುಣವು ಆರ್ಯರಲ್ಲಿ ಬಹುಮಟ್ಟಿಗೆ ವಿಕಾಸಗೊಂಡಿತೆನ್ನಲಿಕ್ಕೇನೂ ಸಂಶಯವಿಲ್ಲ; ನಾವು ಈಗ ಹೇಳಲಿಕ್ಕಿರುವ ಗಣಿತಶಾಸ್ತ್ರವು ಎಲ್ಲ ಶಾಸ್ತ್ರಗಳಲ್ಲಿ ಬಹು ಕಠಿಣ ಹಾಗೂ ನೀರಸ ವಿಷಯವಿದ್ದರೂ, ಹಿಂದೂಜನರಿಗೆ ಅದು ಬಲುಮಟ್ಟಿಗೆ ಪ್ರಿಯವಾಗಿತ್ತೆನ್ನಲಿಕ್ಕೇನೂ ಅಡ್ಡಿಯಿಲ್ಲ. ಗಣಿತಶಾಸ್ತ್ರದ ತಳಹದಿಯನ್ನು ಮೊದಲು ಆರ್ಯರೇ ಹಾಕಿದರು; ಅಷ್ಟೇ ಅಲ್ಲದೆ ಹಿಂದೂಜನರೇ ಸಂಖ್ಯೆಯ ಶೋಧಕರೆಂಬುದನ್ನು ಎಲ್ಲರೂ ಒಪ್ಪುವರು; ಜರ್ಮನಿಯ ಪ್ರಖ್ಯಾತ ವಿದ್ವಾಂಸನಾದ **ಸ್ಲೇಜೆಲ್ಲನು:**— "**ಹಿಂದೂಗಳೇ ದಶಾಂಶ ಪದ್ಧತಿಯನ್ನು ಶೋಧಿಸಿದರು. ಮನುಷ್ಯನು ಮಾಡಿದ ಶೋಧಗಳಲ್ಲಿ ಇದು ಹೆಚ್ಚಿನದು;**"

**ಪ್ರೊ. ಮ್ಯಾಕ್‌ಡೋನೆಲ್ಲರು:—** ೮-೯ ನೇ ಶತಮಾನಗಳಲ್ಲಿ ಹಿಂದೂಜನರು ಗಣಿತಶಾಸ್ತ್ರಕ್ಕೂ ಅರಬರು ಬೀಜಗಣಿತಕ್ಕೂ ಮುಖ್ಯ ಗುರುಗಳಾದರು. ಅವರಿಂದಲೇ ಮುಂದೆ ಈ ಶಾಸ್ತ್ರಗಳು ಬೇರೆ ಜನಾಂಗದವರಿಗೆ ಮುಟ್ಟಿದವು. ಬೀಜಗಣಿತದ ಶ್ರೇಯವನ್ನು ನಾವು ಅರಬರಿಗೆ

ಕೊಡುತ್ತಿದ್ದರೂ, ಅದಕ್ಕೆ ಕೂಡ ಹಿಂದೂಜನರೇ ಉತ್ಪಾದಕರೆಂಬುದು ಸಿದ್ಧವಿದೆ. ಶ್ರೀ ವ್ಯಾಸರ ಭಾಷ್ಯವನ್ನೋದಿದರೆ, ದಶಾಂಶ ಪದ್ಧತಿಯು ಅನೇಕ ಶತಕಗಳಾಚೆಯೇ ಆರ್ಯರಿಗೆ ಪರಿಚಿತವಿತ್ತೆಂಬುದು ತಿಳಿಯುತ್ತದೆ.

**ಸರ ಮೋನಿಯರ ವಿಯಲಿಮ್ಸರು ಅನ್ನುವದು:—** ಬೀಜ ಗಣಿತದ ಪೃಥಕ್ಕರಣದ ಕಲ್ಪನೆಯು ಮೊದಲು ಹಿಂದೂ ಜನರಿಂದಲೇ ಅರಬರಿಗೆ ಸಿಕ್ಕಿತು; ಮುಂದೆ ಅರಬರಿಂದ ಯುರೋಪಕ್ಕೆ ಗೊತ್ತಾಯಿತು;"

**ಪ್ರೊ. ವಾಲೇಸರು** ಭಾಸ್ಕರಾಚಾರ್ಯರ ಲೀಲಾವತಿಯ ಬಗ್ಗೆ ಬರೆಯುವದು:— ಲೀಲಾವತಿ ಗ್ರಂಥದಲ್ಲಿ ಗಣಿತಶಾಸ್ತ್ರದ ಸಾಮಾನ್ಯ ನಿಯಮಗಳು, ಕೂಡುವಿಕೆ, ಕಳೆಯುವಿಕೆ, ಬಡ್ಡಿ, ಲಾಭ ಹಾನಿ, ಅವೇ ಮುಂತಾದವುಗಳ ಬಗ್ಗೆ ಹಲವು ಪ್ರಶ್ನಗಳು ಚರ್ಚಿಸಲ್ಪಟ್ಟಿವೆ. "

**ಮಿ. ಲೆಥಬ್ರಿಜ್ಜ ಎಂಬವರು ಅನ್ನುವದು:—** ಕ್ರಿ. ಶ. ಪೂ. ೨೦೦೦ ವರ್ಷಗಳಾಚೆ ಅರ್ವಾಚೀನ ಯುರೋಪಿಯರು ಗಣಿತಶಾಸ್ತ್ರದಲ್ಲಿರುವ differential calculus ಕ್ಕೆ ಹೊಂದುವಂಥ ತತ್ವವನ್ನೇ ಭಾಸ್ಕರಾಚಾರ್ಯರು ತಮ್ಮ ಲೀಲಾವತೀ ಗ್ರಂಥದೊಳಗೆ ಚರ್ಚಿಸಿದಂತೆ ಕಾಣುತ್ತದೆ. "

**ರೇಖಾಶಾಸ್ತ್ರ:—** ಪ್ರಾಚೀನ ಹಿಂದೂಗಳಿಗೆ ರೇಖಾಶಾಸ್ತ್ರದ ಪರಿಚಯವೂ ಚನ್ನಾಗಿದ್ದಿತು; ಸೂರ್ಯಸಿದ್ಧಾಂತ ಗ್ರಂಥವು ಬರೆಯಲ್ಪಡುವ ಮುಂಚೆಯೇ ಅನೇಕ ಶತಕಗಳಾಚೆ ಆರ್ಯರಿಗೆ ರೇಖಾಶಾಸ್ತ್ರವು ಗೊತ್ತಿರಲಿಕ್ಕೆಬೇಕೆಂಬುವ ಬಗ್ಗೆ ಆಧಾರಗಳು ಶಿಗುತ್ತವೆಂದು ಮಿಲ್ಲ ಎಂಬುವರು ಬರೆದ 'ಹಿಂದುಸ್ಥಾನ' ವೆಂಬ ಪುಸ್ತಕದಲ್ಲಿದೆ. ಪಾಯಥಾಗೋರಾಸನು ರೇಖಾಶಾಸ್ತ್ರದಲ್ಲಿಯ ೪೭ ನೇ ಸಿದ್ಧಾಂತವನ್ನು ಹಿಂದೂಜನರಿಂದಲೇ ಕಲಿತನಂತೆ.

**ಪ್ರೋ. ವಾಲೇಸರನ್ನುವದು**:— ಸೂರ್ಯಸಿದ್ಧಾಂತವೆಂಬ ಗ್ರಂಥದಲ್ಲಿ ತ್ರಿಕೋನ ರೇಖಾಶಾಸ್ತ್ರದ (Trignometry) ಬಗ್ಗೆ ಹೆಚ್ಚು ವಿಚಾರ ಮಾಡಲಾಗಿದೆ; ಅಂದರೆ ಅದು ರೇಖಾಶಾಸ್ತ್ರದ ಮೇಲೆಯೇ ಕಟ್ಟಲ್ಪಟ್ಟಿದೆ. ಇದು ಗ್ರೀಕರಿಗೂ ಎರಡು ಶತಮಾನಗಳಾಚೆ ಯುರೋಪಿಯರಿಗೂ ಗೊತ್ತಿರಲಿಲ್ಲ. ತ್ರಿಕೋಣದ ಆಕ್ರತಿಯೇ ಯುರೋಪಿಯರಿಗೆ ಹೊಸದು."

**ಜ್ಯೋತಿಷಶಾಸ್ತ್ರ:—** ಜ್ಯೋತಿಷಶಾಸ್ತ್ರವು ಅತ್ಯಂತ ಸುಧಾರಿಸಿದವರ ಪ್ರೀತಿಯ ವಿಷಯವೇ ಹೊರತು ಅಂತಿಂಥವರದಲ್ಲ; ಆದುದರಿಂದ ಜ್ಯೋತಿಜ್ಞಾನದ ಬೆಳವಣಿಗೆಯೇ ಯಾವುದೊಂದು ಜನಾಂಗದ ನಾಗರಿಕತೆಯ ಕುರುಹು. ನಮ್ಮ ಪ್ರಾಚೀನ ಹಿರಿಯರಿಗೆ ಜ್ಯೋತಿರ್ವಿಜ್ಞಾನವು ಎಷ್ಟರ ಮಟ್ಟಿಗೆ ಗೊತ್ತಿತ್ತೆಂಬುದರ ಮೇಲಿಂದಲೇ ಈ ವಿಷಯದಲ್ಲಿ ಅವರೆಷ್ಟು ಪಾರಂಗತರಿದ್ದರೆಂಬುದು ಸ್ಪಷ್ಟವಾಗುತ್ತದೆ. ಈ ವಿಷಯವಾಗಿ ಬೇರೆ ಬೇರೆ ಪಾಶ್ಚಾತ್ಯ ವಿದ್ವಾಂಸರು ಅನ್ನುವದು:—

ಮಿ. ವೆಬರರು:— ಕ್ರಿ. ಶ. ಪೂ. ೨೭೮೦ ವರ್ಷಗಳಿಂದಲೂ ಜ್ಯೋತಿಷಶಾಸ್ತ್ರವು ಹಿಂದುಸ್ಥಾನದಲ್ಲಿ ರೂಢಿಯಲ್ಲಿತ್ತು;

ಮಿ. ಬೆಲಿ, ಜೆಂಟೀಲ, ಸ್ಲೇಫೆಯರ ಮುಂತಾದವರು ಅನ್ನುವದು:— "ಕ್ರಿ. ಶ. ಪೂ. ೬ ಸಾವಿರ ವರ್ಷಗಳಿಂದಲೂ ಹಿಂದೂಜನರಿಗೆ ಜ್ಯೋತಿಃಶಾಸ್ತ್ರವು ಚನ್ನಾಗಿ ಗೊತ್ತಿತ್ತು."

ಒಬ್ಬ ಫ್ರೆಂಚ ವಿದ್ವಾಂಸನು ಬರೆದಿಟ್ಟದ್ದು:— ೧೪ ನೇ ಲುಯಿಯು ಸಯಾಮದ ರಾಜನ ಬಳಿಗೆ ಒಬ್ಬ ರಾಯಭಾರಿಯನ್ನು ಕಳಿಸಿದನು; ಅವನು ಸಯಾಮದಿಂದ ಸೂರ್ಯಗ್ರಹಣದ ಬಗ್ಗೆ ಕೆಲ ಸಂಗತಿಗಳನ್ನು ತಿಳಿದುಕೊಂಡು ಬಂದನು; ಮತ್ತೊಬ್ಬ ರಾಯಭಾರಿಯು ತಿರುವಲ್ಲೂರಿನ ಬ್ರಾಹ್ಮಣ ವಿದ್ವಾಂಸರಿಂದ ಸೂರ್ಯಗ್ರಹಣದ ಗತಿ ತಿಳಿದುಕೊಂಡು ಬಂದನು. ಅವೆಲ್ಲವುಗಳಿಗೂ ತತ್ಕಾಲಿನ ಫ್ರೆಂಚ ವಿದ್ವಾಂಸರು ಸರಿ ಹಚ್ಚಿ ನೋಡಿದರೆ, ಅವು ಸಂಪೂರ್ಣ ಹೊಂದಿದ್ದಲ್ಲದೆ ಒಂದು ನಿಮಿಷ ಕೂಡ ಹೆಚ್ಚು ಕಡಿಮೆ ಬರಲಿಲ್ಲ."

**ಸರ ಹಂಟರರು ಅನ್ನುವದು:— " ಕೆಲ ಕೆಲವು ಅಂಶಗಳಲ್ಲಿ ಬ್ರಾಹ್ಮಣರು ಗ್ರೀಕರ ಜ್ಯೋತಿಃಶಾಸ್ತ್ರಕ್ಕೂ ಬಹು ಮುಂದೆ ಹೋಗಿದ್ದರು;"**

ಹಿಂದೂ ಜ್ಯೋತಿಃಶಾಸ್ತ್ರದಲ್ಲಿ ಬ್ರಹ್ಮಸಿದ್ಧಾಂತ, ಸೂರ್ಯಸಿದ್ಧಾಂತ, ಸೋಮಸಿದ್ಧಾಂತ, ಬೃಹಸ್ಪತಿಸಿದ್ಧಾಂತ, ಗಾರ್ಗ್ಯಸಿದ್ಧಾಂತ, ನಾರದಸಿದ್ಧಾಂತ, ಪರಾಶರಸಿದ್ಧಾಂತ, ಪುಲಸ್ತ್ಯಸಿದ್ಧಾಂತ, ವಸಿಷ್ಠಸಿದ್ಧಾಂತ ಹೀಗೆ ೯ ಸಿದ್ಧಾಂತಗಳಿರುವವು; ಇವುಗಳಲ್ಲಿ ಸೂರ್ಯಸಿದ್ಧಾಂತವೇ

ಯುರೋಪಿಯರಿಗೆ ವಿಶೇಷ ಪರಿಚಿತವಿರುವದು.

**ಎಲಫಿನಸ್ಟನ್ನರು ಅನ್ನುವದು:—** "ವಿಷುವೃತ್ತದ ಜ್ಞಾನದಲ್ಲಿ ಆರ್ಯರು ಅರಬರಕಿಂತಲೂ ಮುಂದಿದ್ದರು;"

**ಪ್ರೊ. ವಿಲಸನ್ನರು:—** "ಹಿಂದೂಜನರ ಜ್ಯೋತಿಃಶಾಸ್ತ್ರವನ್ನು ಅಭ್ಯಾಸ ಮಾಡಿದರೆ, ಪ್ರಾಚೀನ ಕಾಲಕ್ಕೆ ಆರ್ಯರಿಗೆ ಸರಿಯಾದ ನಿರೀಕ್ಷಣ ಶಕ್ತಿ ಹಾಗೂ ಅನುಮಾನ ಶಕ್ತಿಗಳಿದ್ದವೆಂದು ಪ್ರತೀತವಾಗುತ್ತದೆ. ಗ್ರಹಣ ಗಳು, ಸೂರ್ಯಮಂಡಲ, ಗ್ರಹಗಳಗತಿ, ವಿಷುವೃತ್ತ, ಪೃಥ್ವಿಯು ತನ್ನಿಂದ ತಾನೇ ನಿಲುವಿಕೆ, ಅಕ್ಷದ ಮೇಲೆ ಪೃಥ್ವಿಯು ತಿರಗುವಿಕೆ, ಗ್ರಹಪಥದ ಉದ್ದಗಲ, ಗ್ರಹಣಗಳ ಲೆಖ್ಖ ಇವೆಲ್ಲವುಗಳನ್ನರಿತವರು ಸುಧಾರಿಸಿದವರಲ್ಲ ವೆಂದನ್ನಲಿಕ್ಕಾಗದು."

ಹಿಂದೂಜನರ ಜ್ಯೋತಿಷಶಾಸ್ತ್ರವು ಸ್ವತಂತ್ರವೂ ವೈಶಿಷ್ಟ್ಯಯುಕ್ತವೂ ಇದೆ; ಆದರೂ ಕೆಲವೆಡೆ ಹಿಂದೂ ಹಾಗೂ ಮಿಕ್ಕ ಜನಾಂಗದವರ ಜ್ಯೋತಿಷವು ಬಹು ಮಟ್ಟಿಗೆ ಹೊಂದುತ್ತದೆ. ವೈದ್ಯಕಿಯಂತೆಯೇ ಈ ಜ್ಞಾನವನ್ನು ಕೂಡ ಅರಬರು ಹಿಂದೂಜನರಿಂದಲೇ ಕಲಿತರು. ಬಗದಾದ ಖಲೀಪನು ಹಿಂದುಸ್ಥಾನದಿಂದ ಅನೇಕ ಮಂದಿ ಜ್ಯೋತಿರ್ವಿದರನ್ನು ಕರೆ ಯಿಸಿದ್ದನಂತೆ; ಜ್ಯೋತಿಃಸಿದ್ಧಾಂತಗಳನ್ನು 'ಸಿಂಡಹೆಂಡ್ಸ' ಎಂಬ ಹೆಸರಿ ನಿಂದ ಅರಬರು ಭಾಷಾಂತರಿಸಿದರು. ಆರ್ಯಜ್ಯೋತಿಃಶಾಸ್ತ್ರದ ಪುರಸ್ಕರ್ತ ನಾದ ಪರಾಶರನು ಕ್ರಿ. ಶ. ಪೂ. ೧೩ನೇ ಶತಮಾನಗಳಿಗೆ ಮುಂಚೆ ಬಾಳಿದ್ದ ನೆಂದು ಮಿ. ಹೂಟನ್ನ ಎಂಬವರು ಜ್ಯೋತಿರ್ಗಣನೆಯಿಂದ ಸಿದ್ಧಪಡಿಸಿರು ವರು. ಪರಾಶರರ ತರುವಾಯ ಆರ್ಯಭಟ್ಟನು ಹುಟ್ಟಿದನು. ಈತನು ಆರ್ಯಭಟ್ಟಿಕಾ, ದಶಗೀತಿಕಾ, ಆರ್ಯಾಷ್ಟಶತವೆಂಬ ಮೂರು ಗ್ರಂಥ ಗಳನ್ನು ಬರೆದನು. ಯುರೋಪಿಯ ಪದ್ಧತಿಯಂತೆ, ಪೃಥ್ವಿಯು ಅಕ್ಷದ ಸುತ್ತು ತಿರಗುವ ತತ್ವವನ್ನು ಈತನು ಹುಡುಕಿ ಅದರಂತೆ ಪ್ರತಿಪಾದಿಸಿದನು. ಇವನ ತರುವಾಯ ವರಾಹ ಮಿಹಿರನು ಉದಯಿಸಿದನು; ಈತನು ಬೃಹ ತ್ಸಂಹಿತೆಯೆಂಬ ಗ್ರಂಥ ಬರೆದನು; ಅದರಂತೆ ಬೃಹಜ್ಜಾತಕವೂ ಈತನದೇ. ಈತನ ತರುವಾಯ ಭಾಸ್ಕರಾಚಾರ್ಯನು ಹುಟ್ಟಿದನು. ತನ್ನ ಸಿದ್ಧಾಂತ ದಲ್ಲಿ ಈತನು ಗುರುತ್ವಾಕರ್ಷಣದ ತತ್ವವನ್ನೇ ಪ್ರತಿಪಾದಿಸಿದನು; ಆದರೂ

ಇವನ ಗಣಿತದ ಸಿದ್ಧಾಂತಗಳನ್ನೋದಿದರೆ, ಜಾಗತಿಕ ಗಣಿತಜ್ಞರಲ್ಲಿ ಇವನೇ ಶ್ರೇಷ್ಠನೆಂದು ಎಲ್ಲರೂ ಒಪ್ಪುವರು. ಪೃಥ್ವಿಯು ದುಂಡಗೆ ಇದ್ದು ಸೂರ್ಯನಸುತ್ತು ತಿರಗುವದೆಂಬ ಸಿದ್ಧಾಂತಗಳು ಆರ್ಯರಿಗೆ ಮೊದಲಿನಿಂದಲೂ ಗೊತ್ತು; 'ಸೂರ್ಯನು ಮೂಡುವದಿಲ್ಲ ಮುಳುಗುವದಿಲ್ಲ; ಆದರೆ ಪೃಥ್ವಿಯು ಅಕ್ಷದ ಮೇಲೆ ತಿರಗುವಾಗ ಅದರ ಮೇಲೆ ಸೂರ್ಯನ ಪ್ರಕಾಶ ಬಿದ್ದರೆ, ಅದಕ್ಕೆ ದಿವಸವೆನ್ನುವದು; ಇಲ್ಲದಿದ್ದರೆ ರಾತ್ರಿಯೆನ್ನುವರು." ಎಂದು ಐತರೆಯ ಬ್ರಾಹ್ಮಣದಲ್ಲಿ ಹೇಳಲ್ಪಟ್ಟದೆ. ನಾವಿನಲ್ಲಿ ಕುಳಿತ ಮನುಷ್ಯನ ಕಣ್ಣಿಗೆ ತಾನು ನಿಂತಲ್ಲಿಯೇ ನಿಂತಿದ್ದು ಜಗತ್ತು ಓಡುತ್ತಿರುವಂತೆ ಕಾಣುವ ಹಾಗೆಯೇ ಪೃಥ್ವಿಯಗತಿಯೆಂದು ಆರ್ಯಭಟ್ಟನು ಹೇಳಿರುವನು; ಅದರಲ್ಲಿಯೇ ಮುಂದೆ ಆರ್ಯಭಟ್ಟನು ಅನ್ನುವದು:— ವಿಷುವೃತ್ತದ ಹತ್ತರ ಲಂಕೆಯಲ್ಲಿ ಸೂರ್ಯೋದಯವಾದರೆ, ಜಾವಾದ್ವೀಪದಲ್ಲಿ ಮಧ್ಯಾಹ್ನವಾಗುವದು, ಅಮೇರಿಕೆಯಲ್ಲಿ ಸೂರ್ಯಾಸ್ತವಾಗುವದು; ರೋಮದಲ್ಲಿ ಮಧ್ಯರಾತ್ರಿಯಾಗುವದು.

**लंकापुरेऽर्कस्य यदोदयः स्यात्तदा दिनार्धं यमकोटिपुर्याम्॥**
**भवेत्तदा सिद्धपुरेऽस्तकालः स्याद्रोमके रात्रिदलं तदैव॥**

ಪೃಥ್ವಿಯ ಆಕಾರದ ಬಗ್ಗೆ ಬರೆಯುವಾಗ "ಭೂಗೋಳದ ಸುತ್ತಳತೆಯು ೪೯೬೭ ಯೋಜನ, ಅದರ ವ್ಯಾಸವು ೧೫೮೧$\frac{೧}{೨೪}$ ಯೋಜನ."

(ಒಂದು ಯೋಜನವೆಂದರೆ ೫ ಮೈಲುಗಳೆಂದು ತಿಳಿಯಬೇಕು.)

"ಸೂರ್ಯನ ಗುರುತ್ವಾಕರ್ಷಣೆಯಿಂದ ಪೃಥ್ವಿಯು ಅಂತರಾಳದಲ್ಲಿ ನಿಂತಿರುವದೆಂದು ಯಜುರ್ವೇದದಲ್ಲಿ ಹೇಳಲ್ಪಟ್ಟದೆ; ಗುರುತ್ವಾಕರ್ಷಣದ ತತ್ವವನ್ನು ಸಿದ್ಧಾಂತ ಶಿರೋಮಣಿಯಲ್ಲಿ ಭಾಸ್ಕರಾಚಾರ್ಯರು ನ್ಯೂಟನ್ನನು ಶೋಧಿಸುವ ಮೊದಲೇ ಗೊತ್ತುಹಚ್ಚಿ ಬರೆದಿಟ್ಟದ್ದಾರೆ. ಪೃಥ್ವಿ, ನಕ್ಷತ್ರ, ಮುಂತಾದವುಗಳಿಗೆ ಸೂರ್ಯನಿಂದಲೇ ಬೆಳಕು ಸಿಗುತ್ತದೆ; ಚಂದ್ರನು ಕೂಡ ತನ್ನ ಬೆಳಕಿಗಾಗಿ ಸೂರ್ಯನನ್ನೇ ಅವಲಂಬಿಸಿರುವನು.

ಗ್ರಹಣದದೆಸೆಯಿಂದ ಆರ್ಯಭಟ್ಟನು ಬರೆಯುವದು:— ಪೃಥ್ವಿಯ ಪ್ರದಕ್ಷಿಣೆಯ ನಡುವೆ ಸೂರ್ಯಚಂದ್ರರು ಬಂದರೆ, ಪೃಥ್ವಿಯ ನೆರಳು

ಚಂದ್ರನ ಮೇಲೆ ಬಿದ್ದು ಚಂದ್ರಗ್ರಹಣವಾಗುವದು; ಚಂದ್ರನು ಸೂರ್ಯ ಹಾಗೂ ಪೃಥ್ವಿಗಳ ನಡುವೆ ಬಂದರೆ, ಸೂರ್ಯಗ್ರಹಣವಾಗುತ್ತದೆ.

೨-೩ ಶತಕಗಳ ಮುಂಚೆ ರಜಪುತಸ್ಥಾನದಲ್ಲಿ ರಾಜಾ ಜೈಸಿಂಗನೆಂಬ ಜ್ಯೋತಿರ್ವಿದನು ಹುಟ್ಟಿದನು. ಈತನು ಜಯಪುರದ ಅರಸು. ಜಯಪುರ ಮಥುರಾ, ಕಾಶಿ, ದಿಲ್ಲಿ, ಉಜ್ಜನಿ, ಮುಂತಾದವುಗಳಲ್ಲಿ ಈತನು ಒಂದೊಂದು ವೇಧಶಾಲೆಗಳನ್ನು ಕಟ್ಟಿಸಿ (observatory) ದನು; ಅಲ್ಲದೆ ಅನೇಕ ಗ್ರಹಣಗಳನ್ನು ಹುಡುಕಿದ್ದನಂತೆ! ಇವನು ಕಟ್ಟಿಸಿದ ವೇಧಶಾಲೆಯು ಈಗ್ಯೂ ಕಾಶಿಯಲ್ಲಿ ಅದೆ.

**ಪ್ರೊ. ಸರ ವಿಲಿಯಮ್ಸನ್ನರು ಅನ್ನುವದು:**— "ಹಿಂದೂಗಳಿಗೆ ಜ್ಯೋತಿಷ್ಯದ ಇಷ್ಟು ಅಗಾಧಜ್ಞಾನವಿರುವ ಮೂಲಕವೇ ಅವರು ಯುಗಗಳ ಲೆಖ್ಖ ಮಾಡುವದುಂಟು; ಲಕ್ಷಾವಧಿ ವರ್ಷಗಳ ಲೆಖ್ಖವನ್ನು ಮಾಡುವ ಧೈರ್ಯವು ಯಾವ ಆಧುನಿಕ ಜ್ಯೋತಿರ್ವಿದನಿಗೂ ಇಲ್ಲ.

**ಸೃಷ್ಟಿಯ ಉತ್ಪತ್ತಿಯ ಬಗ್ಗೆ ಆರ್ಯರ ಕ್ರಮ:**— ಆರ್ಯರು ಈ ಸೃಷ್ಟಿಯನ್ನು ಬ್ರಹ್ಮದಿನ, ಬ್ರಹ್ಮ ರಾತ್ರಿಯೆಂದು ಎರಡು ಬಗೆಯಾಗಿ ವಿಂಗಡಿಸಿರುವರು. ಅಥರ್ವವೇದದಲ್ಲಿ ಹೇಳಿರುವಂತೆ ಒಂದು ಬ್ರಹ್ಮದಿನವೆಂದರೆ ೪ ಅಬ್ಜ, ೩೨ ಕೋಟಿ ವರ್ಷಗಳು.

**(शतं तेऽयुतं हायनान्द्वे युगे त्रीणि चत्वारि कृण्म ॥**

**अथर्व प्र० ८. अनु० २ मं० २१)**

ಒಂದು ಬ್ರಹ್ಮದಿನವೆಂದರೆ, ನಾಲ್ಕು ಯುಗಗಳುಳ್ಳ ಒಂದು ಸಾವಿರ ಚತುರ್ಯುಗಗಳು. ಅಥವಾ ದಿವ್ಯ-ಯುಗಗಳು.

**(दैविकानां युगानान्तु सहस्रं परिसंख्यया।**
**ब्राह्ममेकमहर्ज्ञेयं तावतीं रात्रिमेव च ॥**

**मनु ॥ अ० १ श्लो० ७२.)**

ಸತ್ಯ, ತ್ರೇತಾ, ದ್ವಾಪರ, ಕಲಿ ಈ ನಾಲ್ಕು ಯುಗಗಳಿಗೆ ದಿವ್ಯಯುಗಗಳೆಂದು ಹೆಸರು; ಸತ್ಯಯುಗದಲ್ಲಿ ೪೮೦೦ ವರ್ಷಗಳು, ತ್ರೇತಾಯುಗದಲ್ಲಿ ೩೬೦೦, ದ್ವಾಪರದಲ್ಲಿ ೨೪೦೦, ಮತ್ತು ಕಲಿಯುಗದಲ್ಲಿ ೧೨೦೦ ವರ್ಷಗಳು, ಅಂತು ಒಟ್ಟಾರೆ ೧೨೦೦೦ ದಿವ್ಯ ವರ್ಷಗಳು. ೩೬೦ ಸಾಮಾನ್ಯ ವರ್ಷ

ಗಳೆಂದರೆ, ಒಂದು ದಿವ್ಯ ವರ್ಷ. ಈ ಲೆಖ್ಖದಿಂದ, ಸತ್ಯಯುಗದಲ್ಲಿ ೧೭ ಲಕ್ಷ, ೨೮ ಸಾವಿರ ಸಾಮಾನ್ಯ ವರ್ಷಗಳೂ, ತ್ರೇತಾಯುಗದಲ್ಲಿ ೧೨ ಲಕ್ಷ, ೯೬ ಸಾವಿರ ವರ್ಷಗಳೂ, ದ್ವಾಪರದಲ್ಲಿ ೮ ಲಕ್ಷ, ೬೪ ಸಾವಿರ ವರ್ಷಗಳೂ, ಕಲಿಯುಗದಲ್ಲಿ ೪ ಲಕ್ಷ ೩೨ ಸಾವಿರ ವರ್ಷಗಳೂ ಆಗುವವು. ಅಂದರೆ ನಮ್ಮ ಕಣ್ಣಿಗೆ ಈಗ ಕಾಣಿಸುವ ಪೃಥ್ವಿಯು ಈಗಿನ ಸ್ಥಿತಿಯಲ್ಲಿಯೇ ಮೇಲೆ ಹೇಳಿದಂತೆ ೪ ಅಬ್ಜ, ೩೨ ಕೋಟಿ ವರ್ಷಗಳವರೆಗೆ ಬಾಳುವದು. ಇದುವೇ ಬ್ರಹ್ಮದಿನವು. ಒಂದು ಬ್ರಹ್ಮ-ದಿನದೊಳಗೆ ೧೪ ಮನ್ವಂತರಗಳು; ಒಂದು ಮನ್ವಂತರವೆಂದರೆ ೭೧ ಚತುರ್ಯುಗಗಳೆಂದು ಮನುಸ್ಮೃತಿಯಲ್ಲಿ ಹೇಳಲಾಗಿದೆ. ಇದೇವಿಷಯವನ್ನು ಕುರಿತು ಸೂರ್ಯಸಿದ್ಧಾಂತದಲ್ಲಿ:—

**युगानां सप्ततिः सैका मन्वंतरमिहोच्यते।**
**कृताब्दसंख्या तस्यांते संधिः प्रोक्तो जलप्लवः॥**
**ससंधयस्ते मनवः कल्पे ज्ञेयाश्चतुर्दश।**
**कृतप्रमाणः कल्पादौ संधिः पंचदशः स्मृतः॥**
**इत्थं युगसहस्रेण भूतसंहारकारकः।**
**कल्पो ब्राह्ममहः प्रोक्तः शर्वरी तस्य तावती॥**

( सूर्यसि० )

ಮೇಲಿನ ಶ್ಲೋಕದಲ್ಲಿ ಕಾಣಿಸಿರುವಂತೆ, ಈಗಿನ ಜಗತ್ತು ಹುಟ್ಟಿ ೬ ಮನ್ವಂತರಗಳಾದವು. ಈಗಾಗಲೇ ಸ್ವಾಯಂಭುವ, ಸ್ವಾರೋಚಿಷ, ಔತ್ತಮಿ, ತಮಸ, ರೈವತ, ಚಾಕ್ಷುಸ ಇವಿಷ್ಟು ಸಂದಿರುವವು; ಈಗ ನಡೆಯುವದು ೭ ನೇದು. ಮುಂದೆ ಬರತಕ್ಕವು ಇನ್ನು ಏಳು ಉಳಿದಿರುವವು. ಈಗಿನ ಕಲಿಯುಗವೆಂದರೆ, ೨೮ ನೇ ಚತುರ್ಯುಗದ ಕಲಿಯುಗವು. ಈ ಚತುರ್ಯುಗದೊಳಗೆ ಕಲಿಯುಗದಲ್ಲಿಯ ೫೦೧೬ ವರ್ಷಗಳು ಸಂದವು; ಇನ್ನು ಮುಂದೆ ೪ ಲಕ್ಷ ೨೬ ಸಾವಿರ ೯೮೪ ಇಷ್ಟು ವರ್ಷಗಳು ಉಳಿದಿರುವವು. ಅಂದರೆ ಪ್ರಳಯಕಾಲವು ಇನ್ನೂ ೨ ಅಬ್ಜ, ೩೩ ಕೋಟಿ ೩೨ ಲಕ್ಷ, ೨೬ ಸಾವಿರ ೯೮೪ ಇಷ್ಟು ವರ್ಷ ದೂರದಲ್ಲಿದೆ.

**ಯಂತ್ರಕಲೆ-ವಿಜ್ಞಾನ:**— ಹಿಂದೂಗಳ ಯಂತ್ರವಿಜ್ಞಾನವೂ ಬಹು

ಚಮತ್ಕೃತಿ ಜನಕವಾಗಿದ್ದಿತು. ಪಾಶ್ಚಿಮಾತ್ಯರು ಈ ಹೊತ್ತು ಯಂತ್ರ ವಿದ್ಯೆಯಲ್ಲಿ ಇಷ್ಟು ಪ್ರತಿಷ್ಠೆ ಪಡೆದಿದ್ದರೂ, ಅವರಿನ್ನೂ ಇಜಿಪ್ತದಲ್ಲಿರುವಂಥ ಪುರಾತನ ಗೋಪುರಗಳನ್ನೂ ದೊಡ್ಡ ದೊಡ್ಡ ಬಂಡೆಗಲ್ಲುಗಳಲ್ಲಿ ಗುಡಿಗಳನ್ನು ಕೊರೆಯುವ ಕೆಲಸವನ್ನೂ ಮಾಡಿಲ್ಲ. ಆಧುನಿಕ ಕಾಲದಲ್ಲಿ ಫ್ರಾನ್ಸದ ಮಾನ್ಸಡಿಲೆಸೆಪ್ಸ ಸಾಹೇಬರು ಮಾತ್ರ ಜಗತ್ತನ್ನು ಬೆರಗುಗೊಳಿಸುವಂಥ ಸುಯೇಝು ಕಾಲುವೆಯನ್ನು ಕಟ್ಟಿ ಭೂಮಧ್ಯ ಸಮುದ್ರಕ್ಕೂ ಕೆಂಪು ಸಮುದ್ರಕ್ಕೂ ದಾರಿ ಮಾಡಿದರು; ಇದರಿಂದ ಆ ಸಾಹೇಬರ ಹೆಸರು ಅಮರವಾಗಿದೆ. ಪ್ರಾಚೀನ ಹಿಂದೂಜನರು ಯಂತ್ರಕಲೆಯಲ್ಲಿ ಆಶ್ಚರ್ಯಜನಕ ಪ್ರಗತಿಯನ್ನು ಹೊಂದಿದ್ದರೆಂಬುದಕ್ಕೆ ಮಹಾಭಾರತದಲ್ಲಿ ಹಲವು ದೃಷ್ಟಾಂತಗಳಿವೆ; ಪಾಂಡವರ ದೆಸೆಯಿಂದ ಕೃತಜ್ಞತೆಯ ಮೂಲಕ ಮಯಾಸುರನು ರಚಿಸಿದ ಸಭೆಯಲ್ಲಿ ಸೂಕ್ಷ್ಮದರ್ಶಕಯಂತ್ರ, ದೂರದರ್ಶಕ ಯಂತ್ರ, ಗಡಿಯಾರಗಳು ಇದ್ದವೆಂದು ತಿಳಿಯುತ್ತದೆ; ಸಾವಿರಾರು ಜನರು ಕೂಡ್ರುವಂಥ ಈ ಸಭೆಯನ್ನು ಬೇಕಾದ ಕಡೆಗೆ ತಿರುಗಿಸಲು ೮–೧೦ ಜನರಾದರೆ ಸಾಲುತ್ತಿತ್ತು; ಅಗ್ನಿ ರಥವೂ ಈ ಸಭೆಯಲ್ಲಿ ಇಡಲ್ಪಟ್ಟಿತ್ತು; ಪೂರ್ವಿಕ ಹಿಂದೂಗಳಿಗೆ ವಿದ್ಯುತ್ ಹಾಗೂ ಲೋಹಚುಂಬಕ ತತ್ವದ ಜ್ಞಾನವಿದ್ದಿತು; ಮಳೆಯಿಂದಲೇ ವಿದ್ಯುತ್ತು ಹುಟ್ಟುತ್ತದೆಂದು ವೇದಾಂತಿಗಳ ಅಭಿಪ್ರಾಯ; ಗ್ರೀಸದ ದೊಡ್ಡ ಜ್ಞಾನಿಯಾದ ಥೇಲ್ಸನು ಭಾರತೀಯರಿಂದಲೇ ವಿದ್ಯುತ್ತಿನ ಜ್ಞಾನಪಡೆದನಂತೆ! ಭೂಮಿಯೊಳಗಿನ ಉಷ್ಣತೆಯ ವಿದ್ಯುತ್ ಕಿರಣಗಳು ಮನುಷ್ಯನ ಮೈಯಲ್ಲಿ ಸೂರ್ಯನಿಂದ ಸೇರುವದರಿಂದ ಮಲಗುವಾಗ ತಲೆಯನ್ನು ಪೂರ್ವ ದಿಕ್ಕಿಗೆ ಮಾಡಿ ಮಲಗಬೇಕೆಂದು ನಮ್ಮ ಹಿರಿಯರು ಹೇಳುವದುಂಟು; ಅದರಂತೆಯೇ ದಕ್ಷಿಣಕ್ಕೆ ತಲೆ, ಉತ್ತರಕ್ಕೆ ಕಾಲುಮಾಡಿ ಮಲಗಲಿಕ್ಕೂ ಹೇಳುವರು; ಪಶ್ಚಿಮಕ್ಕೆ ತಲೆಮಾಡಿಕೊಂಡು ಮಲಗಿದರೆ ಉಷ್ಣತೆಯ ವಿದ್ಯುತ್ ಪ್ರವಾಹವು ಕಾಲಿನಿಂದ ಮೈಯಲ್ಲಿ ಸೇರಿ ತಲೆಶೂಲಿಗೆ ಕಾರಣವಾಗಬಹುದು; ಇದರಂತೆಯೇ, ದೊಡ್ಡ ದೊಡ್ಡ ದೇವಾಲಯಗಳ ಮೇಲೆ ಸಿಡಿಲಿನ ಧಕ್ಕೆಯಾಗಬಾರದೆಂದು ಕಬ್ಬಿಣ–ತಾಮ್ರಗಳ ಸಾಮಾನುಗಳನ್ನು ಇಡುವದುಂಟು; ಕಾಲು ಒಳದರೆ, ಮುರಿದರೆ, ಆ ಭಾಗವು ನೆಟ್ಟಗಾಗಬೇಕೆಂದು ಕಬ್ಬಿಣ, ತಾಮ್ರ ಮುಂತಾದ

ಧಾತುಗಳ ಸರಪಳಿಯನ್ನು ಹಾಕುವ ವಾಡಿಕೆಯುಂಟು; ಪ್ರಾರ್ಥನೆಗಾಗಲಿ, ಊಟಕ್ಕೆ ಕುಳ್ಳಿರುವಾಗಾಗಲಿ ಉಣ್ಣೆಯ ವಸ್ತ್ರಗಳನ್ನು ಹಾಸಿಕೊಳ್ಳುವದು, ರೇಶ್ಮೆ ವಸ್ತ್ರಗಳನ್ನು ಉಟ್ಟುಕೊಳ್ಳುವದುಂಟು; ಕಾಶಿಯ ಶ್ರೀ ವಿಶ್ವೇಶ್ವರನ ಚಿನ್ನದ ದೇವಾಲಯವು ವಿದ್ಯುತ್-ರಕ್ಷಕವಿರಬೇಕೆಂಬ ಉದ್ದೇಶದಿಂದಲೇ ಹಾಗೆ ಮಾಡಿರಬಹುದು. ಸೂರ್ಯನಲ್ಲಿ ರೋಗಹಾರಕ, ಜ್ಞಾನವರ್ಧಕ, ಕಾಂತಿವರ್ಧಕ ಗುಣವಿರುವದನ್ನು ತಿಳಿದುಕೊಂಡು ಈಗೀಗ ಅಮೇರಿಕದ ಜನರು ಕೂಡ ಆರ್ಯರ ಸೂರ್ಯೋಪಾಸನೆಯ ಗುಟ್ಟನ್ನು ಚನ್ನಾಗಿ ತಿಳಿಯಲಾರಂಭಿಸಿರುವರು.

---

# ೧೧ ನೆಯ ಪ್ರಕರಣ.

## ವ್ಯಾಪಾರ

**೩೦ ಶತಕಗಳ ವರೆಗೆ ಅಖಂಡವಾಗಿ ಹಿಂದುಸ್ಥಾನವು ಇಡೀ ಜಗತ್ತಿಗೆ ವ್ಯಾಪಾರ ಕೇಂದ್ರವಾಗಿದ್ದಿತು; ವ್ಯಾಪಾರದ ದೆಸೆಯಿಂದ ಹಿಂದೂಜನರು ದಕ್ಷಿಣಚೀನ, ಮಲಾಯಾ, ಅರೇಬಿಯಾ, ಅಲ್ಲದೆ ಆಫ್ರಿಕಾದ ಪೂರ್ವದಂಡೆಯಲ್ಲಿ ವಾಸವಾಗಿದ್ದರು; ರೋಮದವರ ಸಂಗಡ ಹಿಂದೂಗಳ ವ್ಯಾಪಾರ ನಡೆಯುತ್ತಿತ್ತು."**

**—ಪ್ರೋ. ರಾಧಾಕುಮುದ ಮುಕರ್ಜಿ.**

ಈ ಹೊತ್ತು ಹಿಂದೂ ಜನರಿಗೆ ಜಗತ್ತಿನ ವ್ಯಾಪಾರ ಸಾಮ್ರಾಜ್ಯದೊಳಗೆ ಎಷ್ಟು ಮಹತ್ವವಿರದಿದ್ದರೂ, ಈಗ ನಾವು ಹೇಳಬಯಸುವ ಪ್ರಾಚೀನ ಕಾಲದಲ್ಲಿ ಆರ್ಯರು ಏಸಿಯಾ, ಯುರೋಪ, ಹಾಗೂ ಆಫ್ರಿಕಾಗಳಲ್ಲಿ ನಡೆಯುವ ಸಮುದ್ರ ವ್ಯಾಪಾರದ ಅಧಿಪತಿಗಳಾಗಿದ್ದರೆಂಬುದನ್ನು ಮರೆಯಲಾಗದು; ಆದುದರಿಂದ ಅವರು ತಮ್ಮ ಸ್ವಂತ ಹಡಗುಗಳನ್ನು ಕಟ್ಟಿಕೊಂಡು, ಸಮುದ್ರ ಪರ್ಯಟನ ಮಾಡಿ ಸಮುದ್ರ ಹಾಗೂ ನೆಲದ ಮೇಲೆ ಬೇರೆ ಬೇರೆ ಜನಾಂಗಗಳಲ್ಲಿನಡೆಯುವ ವ್ಯಾಪಾರವನ್ನೆಲ್ಲ ತಮ್ಮ ಕೈಯಲ್ಲಿಟ್ಟುಕೊಂಡಿದ್ದರು.

ಆರ್ಯ ವರ್ತಕರು ವ್ಯಾಪಾರಕ್ಕಾಗಿ ಸಮುದ್ರದಿಂದ ಪ್ರತಿಯೊಂದು ದಿಕ್ಕಿಗೆ ಹೋಗಿ ಬರುತ್ತಿದ್ದ ಬಗ್ಗೆ ಋಗ್ವೇದದಲ್ಲಿ ಉಲ್ಲೇಖವಿದೆ; ರಾಮಾಯಣದಲ್ಲಿ ಯವನ ದ್ವೀಪ, ಸುವರ್ಣದ್ವೀಪ, (ಜಾವಾ, ಸುಮಾತ್ರಾ) ಲೋಹಿತ ಸಾಗರ (ಕೆಂಪುಸಮುದ್ರ) ಮುಂತಾದವುಗಳ ಹೆಸರುಗಳು ಬಂದಿವೆ.

ಶಕುಂತಲಾ, ರತ್ನಾವಲಿ, ಹರ್ಷಚರಿತ, ಶಿಶುಪಾಲವಧ ಮುಂತಾದ ಕಾವ್ಯಗಳಲ್ಲಿ ಕೂಡ ವರ್ತಕರು ಸಮುದ್ರ ಪರ್ಯಟನಕ್ಕೆ ಹೋದ ಬಗ್ಗೆ ಉಲ್ಲೇಖಗಳಿವೆ; ಶಕುಂತಲಾ ನಾಟಕದಲ್ಲಿ "ಧನವೃದ್ಧಿ ಎಂಬ ವರ್ತಕನೊಬ್ಬನು ವ್ಯಾಪಾರಾರ್ಥವಾಗಿ ಸಮುದ್ರ ಪರ್ಯಟನಕ್ಕೆ ಹೋದಾಗ ಸಮುದ್ರದಲ್ಲಿ ಮುಳುಗಿದನು; ಅವನ ಆಸ್ತಿಯು ಎಷ್ಟೋ ಲಕ್ಷಗಟ್ಲೆ ರೂಪಾಯಿ ಇತ್ತು" ಎಂದು ಮುಂತಾದ ವಿಷಯ ಬಂದಿದೆ; ಇದರ ಮೇಲಿಂದ ವ್ಯಾಪಾರವನ್ನು ತಮ್ಮ ಕೈಯಲ್ಲಿಟ್ಟುಕೊಂಡಿರುವವರು ಕುಬೇರ ಪುತ್ರರಿದ್ದರೆಂದು ಸಿದ್ಧವಾಗುತ್ತದೆ.

ಹಿಂದೂಜನರು ಫಿನಿಸಿಯನಾ, ಖಾಲ್ಡಿಯನಾ, ಆಸೀರಿಯನಾ, ಮುಂತಾದ ಘನ ಹೊಂದಿದ ಪ್ರಾಚೀನ ಜನಾಂಗಗಳೊಡನೆ ವ್ಯಾಪಾರ ನಡಿಸಿದ್ದರಿಂದ ಖಾಲ್ಡಿಯನ್ ಭಾಷೆಯ ಶಬ್ದಗಳು ಋಗ್ವೇದದಲ್ಲಿ ಕೆಲವೆಡೆ ಬಂದಿರುವವೆಂದೂ ಆ ಶಬ್ದಗಳು ಸಂಸ್ಕೃತ ಅಲ್ಲವೆಂದೂ ಲೋ. ಟಿಳಕರು ತಮ್ಮದೊಂದು ಲೇಖದಲ್ಲಿ ಆಧಾರಕೊಟ್ಟು ಖಾಲ್ಡಿಯನರ ಶಬ್ದಗಳು ಋಗ್ವೇದದಲ್ಲಿ ಬರಲಿಕ್ಕೆ ಅವರೊಡನೆ ಇದ್ದ ವ್ಯಾಪಾರ ಸಂಬಂಧವೇ ಕಾರಣವೆಂದು ಸಿದ್ಧಪಡಿಸಿದ್ದಾರೆ. ಮಿ. ಕೆನೆಡಿ ಎಂಬುವರು ರಾಯಲ್ ಏಸಿಯಾಟಿಕ ಸೊಸಾಯಟಿಯ ಮಾಸಪತ್ರಿಕೆಯಲ್ಲಿ ಈ ವಿಷಯವಾಗಿ ಬರೆಯುವಾಗ ಅನ್ನುವದು:— ಹಿಂದೂ ಹಾಗೂ ಬಾಬಿಲೊನ ಜನಾಂಗದವರಲ್ಲಿ ಕ್ರಿ. ಶ. ಪೂ ೬ ನೇ ಶತಮಾನದಲ್ಲಿಯೇ ವ್ಯಾಪಾರವು ಅತ್ಯಂತ ಬಲವಾಗಿ ಬೆಳೆಯಿತು; ಆಗ ವ್ಯಾಪಾರವು ಮುಖ್ಯವಾಗಿ ಆರ್ಯ-ದ್ರವಿಡರ ಕೈಯಲ್ಲಿತ್ತು; ಡಾ. ಸಾಯಿಸ ಎಂಬುವರಂತೂ ಹಿಬರ್ಟ ವ್ಯಾಖ್ಯಾನಗಳಲ್ಲಿ "ಕ್ರಿ. ಶ. ಪೂ. ೩೦೦೦ ವರ್ಷಗಳಾಚೆಯೇ ಹಿಂದುಗಳು ಬಾಬಿಲೋನಿಯನ್ನರ ಜೊತೆ ವ್ಯಾಪಾರ ನಡಿಸಿದ್ದರೆಂದು ಅಭಿಪ್ರಾಯಪಟ್ಟಿದ್ದಾರೆ. ಕ್ರಿ. ಶ. ಪೂ ೧೦ ನೇ ಶತಕದಲ್ಲಿ ಹಿಂದುಸ್ಥಾನದಿಂದ ಚಂದನಕಟ್ಟಿಗೆ, ನವಿಲು, ಭಂಗಾರ, ಬೆಳ್ಳಿ,

ಅಲ್ಲದೆ ಬೆಲೆಯುಳ್ಳ ಹರಳುಗಳನ್ನು ತರಲು ಇಸ್ರಾಯಿಲ್‌ದ ಸೋಲೋಮ ನ್ನನೂ, ಟಾಯುರದ ಹಿರಾಮು ಇವರೀರ್ವರು ಅರಸರು ಬೇರೊಂದು ಹಡಗು ಕಳಿಸಿದ್ದರೆಂದೂ, ತಿಳಿಯುತ್ತದೆ. ಆಗ ಹಿಂದುಸ್ಥಾನದ ಹೊರ್ತಾಗಿ ಮತ್ತಾವ ದೇಶಗಳಲ್ಲಿಯೂ ನವಿಲು ಸಿಗುತ್ತಿರಲಿಲ್ಲ; ಅಲೆಕ್ಸಾಂಡರನು ಹಿಂದುಸ್ಥಾನಕ್ಕೆ ದಂಡೆತ್ತಿ ಬಂದಾಗ ತನ್ನೊಡನೆ ನವಿಲುಗಳನ್ನು ತೆಗೆದು ಕೊಂಡು ಹೋಗುವ ವರೆಗೆ ಗ್ರೀಸ, ರೋಮ, ಇಜಿಪ್ತ ಮುಂತಾದ ಜನಾಂಗ ದವರಿಗೆ ಈ ಪಕ್ಷಿಯು ಪರಿಚಯವಿರಲಿಲ್ಲವಂತೆ ! ರೋಮನ್ನರಿಗೆ ನವಿಲಿನ ಹುಚ್ಚು ಬಹಳ ! ಆದುದರಿಂದ ಅದಕ್ಕಾಗಿ ಅವರು ಲಕ್ಷಗಟ್ಟಲೆ ಹಣ ವೆಚ್ಚಮಾಡುತ್ತಿದ್ದರಂತೆ! ನವಿಲುಗಳಂತೆಯೇ ಆನೆಯ ಕೋರೆ, ಆನೆಗಳ ನ್ನಾದರೂ ಗ್ರೀಕರು ಡರಾಯುಸನ ಸಂಗಡ ಯುದ್ಧಕ್ಕೆ ಬಂದಾಗಲೇ ನೋಡಿ ದರು; ಸಕ್ಕರೆಯನ್ನು ಕೂಡ ಗ್ರೀಕರು ಮೊದಲು ಹಿಂದುಸ್ಥಾನದಲ್ಲಿಯೇ ಕಂಡರು; ಅಲ್ಲಿಯವರೆಗೆ ಅವರಿಗೇನೂ ಗೊತ್ತಿರಲಿಲ್ಲ. ಮುಂದೆ ಗ್ರೀಕ ರಿಂದಲೇ ಸಕ್ಕರೆಯು ಪರ್ಶಿಯಾ, ಅರೇಬಿಯಾ ಮುಂತಾದ ದೇಶಗಳಿಂದ ಯುರೋಪಕ್ಕೆ ಗೊತ್ತಾಯಿತು. ನೀಲಿಯಾದರೂ ಹಿಂದುಸ್ತಾನದಿಂದಲೇ ಗ್ರಿಸಕ್ಕೆ ಹೋಗುತ್ತಿತ್ತು; ಅಲ್ಲಿಯವರೆಗೆ ಯಾವ ಜನಾಂಗದವರಿಗೂ ನೀಲಿಯು ಗೊತ್ತಿರಲಿಲ್ಲ. ಗ್ರೀಕರು ಹಿಂದುಸ್ಥಾನದಿಂದ ಮಲಮಲಿ, ಮಸಾಲೆಯಸಾಮಾನು, ಹತ್ತಿ ಮತ್ತು ವಜ್ರ, ರೇಶಿಮೆಯ ಬಟ್ಟೆಗಳನ್ನು ತರಿಸಿಯೇ ಉಪಯೋಗಿಸುತ್ತಿದ್ದರಂತೆ! ಯುರೋಪದಲ್ಲಿ ಗ್ರೀಕ ರೋಮ ದೇಶಗಳು ಹಿಂದೂಗಳ ವ್ಯಾಪಾರದ ಪಡಮೂಲೆಗಳಾಗಿದ್ದಂತೆ, ಆಫ್ರಿಕಾದಲ್ಲಿ ಇಜಿಪ್ತ, ಝಾಂಝಿಬಾರ, ಏಶಿಯಾದಲ್ಲಿ ಅರಬಸ್ಥಾನ, ಚೀನ, ಆಸ್ಟ್ರೇಲಿಯಾ ಇರಾಣ ದೇಶಗಳಾಗಿದ್ದವು; ಮೇಲಾಗಿ ಈ ದೇಶದೊಳಗೆ ಮತ್ತು ಈ ದೇಶದ ವರೊಡನೆ ಹಿಂದೂಗಳು ಸ್ವತಂತ್ರವಾಗಿ ವ್ಯಾಪಾರ ನಡಿಸುತ್ತಿದ್ದರಲ್ಲದೆ ಈ ವ್ಯಾಪಾರವೆಲ್ಲ ಅವರ ಕೈಯಲ್ಲಿಯೇ ಇದ್ದಿತು. ಇಷ್ಟು ದೂರದ ಪ್ರವಾ ಸಕ್ಕೆ ಹಿಂದೂಗಳು ವ್ಯಾಪಾರಕ್ಕಾಗಿ ಹೋಗುತ್ತಿದ್ದರೂ ಪರಕೀಯರ ಹಡ ಗುಗಳಲ್ಲಿ ಕುಳಿತುಕೊಂಡು ಹೋಗುತ್ತಿರಲಿಲ್ಲವೆಂಬುದನ್ನು ನಾವು ಮರೆ ಯಲಿಕ್ಕಾಗದು. ಈ ಬಗ್ಗೆ—

**ಪ್ರೊ. ಹೀರನರು ಅನ್ನುವರು:—** ಹಿಂದೂಗಳು ತಮ್ಮ ಕೈಯಿಂದ

ತಾವೇ ವಿವಿಧ ಆಕಾರದ ಹಡಗುಗಳನ್ನು ಸ್ವತಂತ್ರವಾಗಿ ಕಟ್ಟಿಸಿದ್ದುದರಿಂದ ಅವರು ಪೃಥ್ವಿಯ ಮೇಲೆ ಬೇಕಾದ ನಾಡಿಗೆ ವ್ಯಾಪಾರಕ್ಕಾಗಿ ಜಲಪರ್ಯಟನ ನಡಿಸುತ್ತಿದ್ದರು. ಈ ಹಡಗುಗಳಿಗೆ ಬೇರೆ ಬೇರೆ ಹೆಸರುಗಳಿರುತ್ತಿದ್ದವು. ಕಾರೋಮಾಂಡೇಲ ದಂಡೆಯಲ್ಲಿ ಆಗ ಹಡಗಗಳನ್ನು ಕಟ್ಟುವ ಕೈಗಾರಿಕೆಯು ಅಸಂಖ್ಯ ವರ್ಷಗಳಿಂದ ನಡೆದು ಬಂದುದಾಗಿತ್ತು; ಸಮುದ್ರ ವ್ಯಾಪಾರಕ್ಕೆ ಅನುವಾಗುವಂತೆ ಸಮುದ್ರ ದಂಡೆಗುಂಟ ಎಲ್ಲ ನಾಮಾನುಗಳಿಂದ ಸಿದ್ಧವಿರುವ ಬಂದರಗಳಿದ್ದವು.

ಯುಕ್ತಿಕಲ್ಪತರು ಎಂಬ ಗ್ರಂಥದಲ್ಲಿ ಬೇರೆ ಬೇರೆ ಆಕಾರದ ಹಡಗುಗಳ ವರ್ಣನೆ ಬಂದಿದೆ. ಬಂಗಾಲದ ಅರಸನಾದ ಸಿಂಹಬಾ ಎಂಬುವನು ವಿಜಯ ಎಂಬ ರಾಜಪುತ್ರನನ್ನು ಸಿಂಹಲದ್ವೀಪಕ್ಕೆ ಕಳಿಸಿದಾಗ ಅವನೊಡನೆ ಆ ಹಡಗಿನಲ್ಲಿ ೮೦೦ ಜನರು ಕುಳಿತಿದ್ದರೆಂದು ಉಲ್ಲೇಖವಿದೆ. ಇದರಿಂದ ದೊಡ್ಡ ದೊಡ್ಡ ಹಡಗುಗಳನ್ನು ಕಟ್ಟುವ ಕಲೆಯಲ್ಲಿ ತತ್ಕಾಲೀನರು ಚನ್ನಾಗಿಯೇ ನುರಿತಿದರೆಂಬುದು ವಿದಿತವಾಗುವದು. ಮಲಬಾರದ ದಂಡೆಯಲ್ಲಿ ಹಡಗು ಕಟ್ಟುವ ದೊಡ್ಡ ಕಾರಖಾನೆ ಇತ್ತೆಂದೂ, ಅದರ ವ್ಯಾಪಾರವನ್ನೇ ಅಲ್ಲಿಯವರು ಮಾಡುತ್ತಿದ್ದರೆಂದೂ ಪೆರಿಪ್ಲಸನು ಬರೆದಿರುವನು; ಕಲಿಂಗದೇಶದ ರಾಜರಿಗೆ ಕೊಡುವ ಶಿಕ್ಷಣದಲ್ಲಿ ಹಡಗುಪಡೆ ಹಾಗೂ ಸಮುದ್ರ ವ್ಯಾಪಾರದ್ದೊಂದು ಬೇರೆ ಮುಖ್ಯ ವಿಷಯವೇ ಆಗಿತ್ತೆಂದು ಶಿಲಾಶಾಸನಗಳಿಂದ ತಿಳಿಯುವದು; ಅಲೆಕ್ಸಾಂಡರನ ಆಳಿಕೆಯ ಕಾಲಕ್ಕೆ ಅರಬಸ್ಥಾನದಲ್ಲಿರುವ ಮಸ್ಕತ್ತಪಟ್ಟಣವು ಹಿಂದೂ ದೇಶದ ವ್ಯಾಪಾರಕ್ಕೆ ಮುಖ್ಯ ಪೇಟೆಯಾಗಿತ್ತು; ಅಲ್ಲಿಂದ ಹಿಂದೂ ದೇಶದ ಸರಕು-ಸಾಮಾನುಗಳು ಅಸೀರಿಯಕ್ಕೆ ಹೋಗುತ್ತಿದ್ದವು. ಇಲ್ಲಿಯ ವ್ಯಾಪಾರವು ಹಲವು ಶತಕಗಳ ತನಕ ಹಿಂದೂಗಳ ಕೈಯಲ್ಲಿಯೇ ಇದ್ದಿತು; ಮುಖ್ಯವಾಗಿ ಗುಜ್ಜರೇ ಈ ವ್ಯಾಪಾರ ನಡಿಸುತ್ತಿದ್ದರು. ಮುಂದೆ,

**ಪ್ರೊ. ಹೀರನರು** ಅನ್ನುವದು:- "ಹಿಂದುಸ್ಥಾನವು ಮನಾಲೆಗಳ ಮಾತೃಸ್ಥಾನವು; ಬುನಾದಿಕಾಲದಿಂದ ಇಡೀ ಪಶ್ಚಿಮ ಜಗಕ್ಕೆ ಹಿಂದೂದೇಶವೇ ಮನಾಲೆಯನ್ನು ಪೂರೈಸುತ್ತಿತ್ತು;" ಹಿಂದೂ ಜನರೊಡನೆ ರೋಮನರ ವ್ಯಾಪಾರವು ಬರಬರುತ್ತ ಬೆಳೆದುದರಿಂದ ರೋಮನ್ನರನೇಕರು ದಕ್ಷಿಣಹಿಂದು

ಸ್ಥಾನಕ್ಕೆ ಬಂದು ಒಕ್ಕಲಾಗಿ ನಿಂತರು. ಅವರು ರೋಮದೇಶಕ್ಕೆ ಇಲ್ಲಿಂದ ತಮಗೆ ಬೇಕಾದ ಸಾಮಾನುಗಳನ್ನು ಕಳಿಸುತ್ತಿದ್ದರು. ರೋಮನ್ನರಿಗೆ ಹಿಂದೂಸ್ಥಾನದ ನವಿಲುಗಳಂತೆಯೇ ರೇಶ್ಮೆಯೆಂದರೆ ತೀರಿತು; ಅದರ ತೂಕದಷ್ಟು ಭಂಗಾರ ಕೊಟ್ಟು ರೇಶ್ಮೆಯನ್ನು ಕೊಳ್ಳುತ್ತಿದ್ದರು. ಪ್ರತಿವರ್ಷ ಕೊಟ್ಯವಧಿ ರೂಪಾಯಿಗಳನ್ನು ರೇಶ್ಮೆಯ ವ್ಯಾಪಾರದಿಂದ ಹಿಂದೂಜನರು ರೋಮದಿಂದ ತರುತ್ತಿದ್ದರೆಂದೂ, ಇದೇ ಕ್ರಮವು ಅನೇಕ ವರ್ಷಗಳವರೆಗೆ ನಡೆದಿತ್ತೆಂದೂ ಪ್ಲಿನಿಯು ಒಂದೆಡೆಯಲ್ಲಿ ಬರೆದಿರುವನು. ಹಿಂದೂಜನರು ರೋಮದಿಂದ ವ್ಯಾಪಾರ ನಿಮಿತ್ತದಿಂದ ವೆಗ್ಗಳ ಹಣವನ್ನು ಸುಲಿದುಕೊಂಡು ಒಯ್ಯುತ್ತಿದ್ದರೆಂದು ಈತನೇ ಒಂದೆಡೆಯಲ್ಲಿ ಗುಣಗುಟ್ಟಿದ್ದಾನೆ.

**ನೆಲಮಾರ್ಗದ ವ್ಯಾಪಾರ:—** ನೆಲಮಾರ್ಗದಿಂದಲೂ ಚೀನ, ತುರ್ಕಸ್ಥಾನ, ಇರಾಣ, ಬಾಬಿಲನ್ನ, ಇಜಿಪ್ತ, ಗ್ರೀಸ ರೋಮಗಳವರೆಗೆ ಹಿಂದೂಜನರ ವ್ಯಾಪಾರ ನಡೆಯುತ್ತಿದ್ದಿತು. ಹಿಂದೂ ವರ್ತಕರು ಚೀನದಿಂದಲೇ ರೇಶ್ಮೆಯನ್ನು ಹಿಂದುಸ್ಥಾನಕ್ಕೆ ತರುತ್ತಿದ್ದರು; ಈ ವರ್ತಕರು ತಮ್ಮೊಡನೆ ಸಾವಿರ ಎರಡು ಸಾವಿರ ಸಶಸ್ತ್ರ ಜನರನ್ನು ಕಟ್ಟಿಕೊಂಡು ಮನೆಮಾರು ಬಿಟ್ಟು ಮೂರುಮೂರು ನಾಲ್ಕುನಾಲ್ಕು ವರ್ಷಗಳವರೆಗೆ ವ್ಯಾಪಾರದ ನಿಮಿತ್ತವಾಗಿ ಪರದೇಶಕ್ಕೆ ಹೋಗುತ್ತಿದ್ದರು. ಈ ವರ್ತಕರು ಕಾಬೂಲ ಅಥವಾ ಬ್ಯಾಕ್‌ಟ್ರಿಯದಿಂದ ಹೊರಟು ಮುಂದೆ ಈಶಾನ್ಯ ಮಾರ್ಗವಾಗಿ ಮುನ್ನಡೆಯುತ್ತಿದ್ದರು; ಅಲ್ಲಿಂದ ದಾರಿಯಲ್ಲಿಯ ದೊಡ್ಡ ದೊಡ್ಡ ಪರ್ವತಾವಳಿಗಳನ್ನು ದಾಟಿ ಕಾಶಗರದ ಮೇಲಿಂದ ಹಾಯ್ದು, ಚೀನದಲ್ಲಿಯ ದೊಡ್ಡ ವ್ಯಾಪಾರ ಸ್ಥಳವಾದ ಪೇಕೀನಕ್ಕೆ ಸಾಗುತ್ತಿದ್ದರು.

ಈ ಮೇರೆಗೆ ಪರದೇಶದ ವ್ಯಾಪಾರವೇ ಇಷ್ಟು ಬಲವಾಗಿ ನಡೆದಿರುವಾಗ ಒಳದೇಶದ ವ್ಯಾಪಾರದ ಮಾತನ್ನೇನು ಹೇಳುವದು ? ಹಿಂದುಸ್ಥಾನದಲ್ಲಿಯ ಒಂದು ಪ್ರಾಂತದಿಂದ ಇನ್ನೊಂದು ಪ್ರಾಂತಕ್ಕೆ ಹೋಗಲು, ಸರಕು ಒಯ್ಯಲು ಎಲ್ಲ ದಿಕ್ಕುಗಳಲ್ಲಿ ಅನೇಕ ರಾಯಬೀದಿಗಳಿದ್ದವು; ಮಿ. ಹೀರನರು ಅನ್ನುವದು:— “ಈ ರಾಯಬೀದಿಗಳ ಇಮ್ಮಗ್ಗಲಿಗೆ ಗಿಡಗಳು ಮತ್ತು ಹೂವಿನ ಗಿಡಗಳು ಹಚ್ಚಲ್ಪಟ್ಟಿದ್ದವು.”

ತಕ್ಷಸಿಲೆಯಿಂದ ಲಾಹೋರದ ಮಾರ್ಗವಾಗಿ ಪಾಟಲಿಪುತ್ರ ಅಂದರೆ

ಈಗಿನ ಪಾಟಣಾದದರೆಗೆ ದೊಡ್ಡ ರಾಯಬೀದಿ ಇತ್ತು; ಸ್ಟ್ರ್ಯಾಬೋ ಪ್ಲುಟಾರ್ಕ ಮುಂತಾದವರು ಬರೆದಿಟ್ಟಿದ್ದರ ವಿವರ— " ಹಿಂದುಸ್ಥಾನದಲ್ಲಿ ನೆಲ ವ್ಯಾಪಾರ ನಡೆಯಲು ಅನುವಾಗಬೇಕೆಂದು ರಾಯಬೀದಿಗಳು ಇರುವವಲ್ಲದೆ, ದಾರಿಯ ಅಂತರವನ್ನು ತೋರಿಸುವಂಥ ಮೈಲುಗಲ್ಲುಗಳೂ ಇವೆ; ಅಶೋಕನು ಪ್ರಯಾಣಿಕರಿಗಾಗಿ ಅಲ್ಲಲ್ಲಿ ಧರ್ಮಶಾಲೆಗಳನ್ನೂ ಕಟ್ಟಿಸಿದ್ದಲ್ಲದೆ ರಾಯಬೀದಿಗಳಗುಂಟ ಇಮ್ಮಗ್ಗಲಿಗೆ ಮಾವಿನ ಹಾಗೂ ಆಲದ ಮರಗಳನ್ನು ಹಚ್ಚಿಸಿದ್ದನು; ತನ್ನ ಸಾಮ್ರಾಜ್ಯದೊಳಗೆ ಅರ್ಧ ಹರದಾರಿಗೊಂದು ಭಾವಿ,ಧರ್ಮಶಾಲೆ, ದನಕರುಗಳಿಗಾಗಿ ಹೊಂಡಗಳನ್ನು ಕೂಡ ಏರ್ಪಡಿಸಿದ್ದನು." ಇಷ್ಟು ಸೌಕರ್ಯವು ಯಾವ ಸಮ್ರಾಟನ ಕಾಲಕ್ಕೂ ಇರಲಿಲ್ಲವಂತೆ !

---

# ೧೨ ನೆಯ ಪ್ರಕರಣ.

---

## ಪರರಾಷ್ಟ್ರದವರೊಡನೆ ಸಂಬಂಧ

" ಕಳೆದ ೫ ಸಾವಿರ ವರ್ಷಗಳಲ್ಲಿ ಇದ್ದುದಕ್ಕಿಂತ ಹೆಚ್ಚು ವಿಸ್ತಾರವಾದ ಹಿಂದೂ ಸಾಮ್ರಾಜ್ಯವು ಪ್ರಾಚೀನ ಕಾಲಕ್ಕಿತ್ತು; ಮ್ಯಾಸಿಡೋನಿಯನ್ನರು ಹಿಂದೂಗಳಿಗಾಗಿ ಇರಾಣವನ್ನು ಬಿಟ್ಟುಕೊಟ್ಟಿದ್ದರು. ಮೇವಾಡದ ರಾಣರು ಮೊದಲು ಚಿತ್ತೂರಿನಲ್ಲಿ ತಮ್ಮ ವಂಶವನ್ನು ಸ್ಥಾಪಿಸಿ ಖೊರಾಸಾನಕ್ಕೆ ಹೋದರಂತೆ. ಇದರ ಮೇಲಿಂದ ತತ್ಕಾಲಕ್ಕೆ ಮಧ್ಯಏಸಿಯವು ಹಿಂದೂಜನರ ಒಕ್ಕಲನಾಡಾಗಿತ್ತೆಂದು ಸ್ಪಷ್ಟವಾಗುತ್ತದೆ.

—ಸ್ಟ್ರ್ಯಾಬೋ ಸಾಹೇಬರು.

ಹಿಂದೂಗಳು ಒಂದಾನೊಂದು ಕಾಲಕ್ಕೆ ಎಷ್ಟರ ಮಟ್ಟಿಗೆ ತಮ್ಮ ಸಂಸ್ಕೃತಿಯ ಪ್ರಭೆಯನ್ನು ಜಗತ್ತಿನ ಬೇರೆ ಬೇರೆ ದೇಶಗಳಲ್ಲಿ ಹರಡಿ ತಾವೂ ಅಲ್ಲಿ ಹೋಗಿ ಒಕ್ಕಲಾಗಿದ್ದು ಅವರನ್ನು ಕೂಡ ಸುಸಂಸ್ಕೃತರನ್ನಾಗಿ ಮಾಡಿ

ದರೆಂಬುದಕ್ಕೆ ಈ ವರೆಗೆ ಹಲವು ಉದಾಹರಣೆಗಳನ್ನು ಕೊಟ್ಟಿದ್ದಾಯಿತು. ಆದರೆ ಆರ್ಯರು ಸಂಸ್ಕೃತಿ, ಕಲೆ, ತತ್ವಜ್ಞಾನ ಮುಂತಾದವುಗಳಲ್ಲಿ ಮಿಗಿಲಾದವರಿದ್ದಂತೆ ಯುದ್ಧಕಲೆಯಲ್ಲಿಯೂ ನಿಪುಣರಿದ್ದುದರಿಂದ ಅವರ ಆಳಿಕೆಯು ಪರದೇಶದ ಬೇರೆ ದೇಶಗಳ ಮೇಲೆಯೂ ನಡೆಯುತ್ತಿತ್ತು; ಸಮ್ರಾಟ್‌ನಾದ ಸುದಾಸನು ಬೇರೆ ಬೇರೆ ದೇಶಗಳನ್ನೊಡಗೊಂಡ ಇಡೀ ಜಗವನ್ನೇ ಜಯಿಸಿದನೆಂದು ಐತರೇಯ ಬ್ರಾಹ್ಮಣದಲ್ಲಿ ಹೇಳಿಯಿದೆ; ಅಯೋಧ್ಯೆಯಲ್ಲಿ ಬೇರೆ ಬೇರೆ ದೇಶದ ರಾಯಭಾರಿಗಳಿದ್ದರೆಂದು ಹೇಳಲ್ಪಟ್ಟಿದೆ. ಪುರೂರವನ ವಶದಲ್ಲಿ ಮಹಾಸಾಗರದಲ್ಲಿಯ ೧೩ ನಡುಗಡ್ಡೆಗಳು ಇದ್ದುವೆಂದು ಮಹಾಭಾರತ ಆದಿಪರ್ವದಲ್ಲಿ ಹೇಳಲಾಗಿದೆ. ಹಸ್ತಿನಾಪುರದಲ್ಲಿ ಧರ್ಮರಾಜನು ರಾಜಸೂಯ ಯಾಗವನ್ನು ಮಾಡಿದಕಾಲಕ್ಕೆ ರೋಮದವರು ಅತ್ಯಂತ ಬೆಲೆಯುಳ್ಳ ಕಾಣಿಕೆಗಳನ್ನು ತಂದಿದ್ದರೆಂದು ಉಲ್ಲೇಖವಿದೆ; ಸಗರಮಹಾರಾಯನ ೬೦ ಸಾವಿರ ಮಕ್ಕಳು ಸಮುದ್ರ ಪಯಣದಲ್ಲಿ ನಿಪುಣರಾದ ಅಂಬಿಗರಿದ್ದರೆಂದೂ ಸಗರನು ಅನೇಕ ಸಮುದ್ರಗಳನ್ನಾಳುತ್ತಿದ್ದನೆಂದೂ ಕರ್ನಲ್ ಟಾಡ್ಡರು ತಮ್ಮ ರಾಜಸ್ಥಾನದ ಇತಿಹಾಸದಲ್ಲಿ ಬರೆದಿರುವದು. ಗ್ರೀಕರಿಗೂ ಮೌರ್ಯರಿಗೂ ರಾಜಕೀಯ ಸಂಬಂಧವಿದ್ದು ಸೇಲ್ಯೂಕಸನು ಚಂದ್ರಗುಪ್ತನಿಗೆ ಹೆಣ್ಣು ಕೊಟ್ಟ ಸಂಗತಿಯೂ ಪ್ರಸಿದ್ಧವಿದೆ. ಅಶೋಕನು ಬುದ್ಧಧರ್ಮೋಪದೇಶಕರನ್ನು ಸಿರಿಯಾ, ಇಜಿಪ್ತ, ಮ್ಯಾಸಿಡೋನಿಯಾ, ಯುರೋಪ, ಆಫ್ರಿಕಾಗಳಿಗೆ ಕಳಿಸಿದ್ದನು. ಅಶೋಕನ ಒಂದು ಶಿಲಾಲಿಪಿಯಲ್ಲಿ ಸಿರಿಯಾದ ಆ್ಯಂಟಿಓಕಸ್, ಇಜಿಪ್ತದ ಟಾಲೆಮಿ, ಮ್ಯಾಸಿಡೋನದ ಆ್ಯಂಟಿಗೊನಾಸ್, ಎಪಿರಸದ, ೨ ನೇ ಅಲೆಕ್ಸಾಂಡರ ಇಷ್ಟು ಜನರ ಹೆಸರುಗಳು ಕಂಡುಬರುತ್ತವೆ. ಅದರಂತೆಯೇ, ರಾಜಕೀಯ ದೃಷ್ಟಿಯಿಂದ ಹಿಂದುಸ್ಥಾನದ ಪ್ರತಿಷ್ಠೆಯು ವಿಶೇಷವಾಗಿದ್ದರಿಂದ ದೇಶಾಂತರಗಳಲ್ಲಿರುವ ಮಾಂಡಲಿಕ ರಾಜರು ತಮ್ಮ ದೇಶದ ಸುಂದರ ಕನ್ನಿಕೆಯರನ್ನೂ ಹಿಂದೂರಾಜರ ಕಡೆಗೆ ಪರಿಚಾರಿಕೆಯರನ್ನಾಗಿ ಕಳಿಸುತ್ತಿದ್ದರು; ಇಂಥ ಯವನ (ಗ್ರೀಕ) ಕನ್ನಿಕೆಯರು ಪರಿಚಾರಿಕೆಯರಿದ್ದ ಬಗ್ಗೆ ಕಾಲಿದಾಸನು ತನ್ನ ಕಾವ್ಯಗಳಲ್ಲಿ ವರ್ಣಿಸಿದ್ದಾನೆ. ಮಿ. ವ್ಹಿನ್ಸೆಂಟ ಸ್ಮಿಥ್‌ನೆಂಬ ಇತಿಹಾಸಗಾರನು "ಗಟ್ಟಿಗರಾದ ಗ್ರೀಕ ಸಿಪಾಯಿಗಳು

(ವ್ಲೆಂಛರು) ಉಕ್ಕಿನ ಅಂಗಿಗಳನ್ನು ಹಾಕಿಕೊಂಡು ತಮಿಳ ಅರಸರ ಬೆಂಗಾವಲಿಗಿದ್ದರೆಂದು ಬರೆದಿರುವನು. ಅದರಂತೆ, ಮಿ. ಪಿಳ್ಳೈ ಎಂಬವರು "ಪಾಂಡ್ಯ ಅರಸರ ಸೈನ್ಯದಲ್ಲಿ ರೋಮರು ಕೆಲಸಕ್ಕೆ ಇದ್ದರು; ಮಧುರೆಯ ಕೋಟೆಯ ಬಾಗಿಲಕಾಯುಲು ರೋಮ ದೇಶದ ಸಿಪಾಯಿಗಳಿದ್ದರೆಂದೂ ತಮಿಳರ ಆಳಿಕೆಯ ಇತಿಹಾಸದಲ್ಲಿ ಬರೆದಿರುವರು.

ಹಿಂದೂರಾಜರು ತಮ್ಮ ರಾಯಭಾರಿಗಳನ್ನು ಆಗಾಗ್ಗೆ ಪರದೇಶಗಳಲ್ಲಿಯ ರಾಜರ ಕಡೆಗೆ ಕಳಿಸುತ್ತಿದ್ದರೆಂದೂ, ಅವರೂ ಹಿಂದೂಜನರ ಕಡೆಗೆ ಕಳಿಸುತ್ತಿದ್ದರೆಂದೂ ರೋಮದ ಇತಿಹಾಸಗಳಲ್ಲಿ ಆಧಾರಗಳು ಸಿಗುತ್ತವೆ. ಕ್ರಿ. ಶ. ೧೮೦ ಹಾಗೂ ೩೬೧ ರಲ್ಲಿ ಅನೇಕ ಹಿಂದೂ ರಾಯಭಾರಿಗಳು ಸಮ್ರಾಟ ಜ್ಯೂಲಿಯನ್ ಕಡೆಗೆ ಹಿಂದೂ ರಾಜರಿಂದ ಕಳಿಸಲ್ಪಟ್ಟಿದ್ದರು.

ಹಿಂದುಸ್ಥಾನವು ಆಗ ಸ್ವತಂತ್ರವೂ, ಸಂಪನ್ನವೂ, ಪ್ರಭಾವಶಾಲಿಯೂ, ಸುಸಂಸ್ಕೃತವೂ, ಆಗಿದ್ದಿತೆಂದು ಪರದೇಶದವರು ಅದರೊಡನೆ ಸಂಬಂಧ ಬೆಳಿಸಲು, ಅವರಲ್ಲಿ ಊಳಿಗಕ್ಕೆ ನಿಲ್ಲಲು ಕೂಡ ಅನೇಕ ಜನಾಂಗದವರು ಹಾತೊರೆಯುತ್ತಿದ್ದರು; ಒಂದಾನೊಂದು ಕಾಲಕ್ಕೆ ತನ್ನ ವಿಶಾಲವಾದ ನೆರಳಲ್ಲಿ ಅನೇಕ ಜನಾಂಗಗಳನ್ನು ಬೆಳೆಯಿಸಿದ ಆ ಪುರಾತನ ಹಿಂದೂರಾಷ್ಟ್ರವೇ ಈಗಿನಂಥ ಮುಪ್ಪಿನಾವಸ್ಥೆಯಲ್ಲಿ ಪರರಾಳಾಗಿ ಬಾಳುವ ಹೊತ್ತು ಬಂದಿದೆ! ಸಾವಿರಾರು ವರ್ಷಗಳ ಪರ್ಯಂತರ ಪ್ರಭಾವಶಾಲಿಯಾದ ಸೂರ್ಯನಂತೆ ಗಗನ ಮಂಡಲದಲ್ಲಿ ಮೆರೆದ ಆ ಪುರಾಣರಾಷ್ಟ್ರವೀಗ ಅಸ್ತಾಚಲಕ್ಕಡರಿದೆ! ಜಗದರಸರಾದ ಅದರ ರಾಜರು, ಈಹೊತ್ತು ಜಗದಾಳುಗಳಾಗಿದ್ದಾರೆ! ಇದೀಗ ದೈವಲೀಲೆಯೆಂಬುದು!

ತನ್ನ ಇಳಿತರದ ಕಾಲದಲ್ಲಿ ಕೂಡ ಹಿಂದುಸ್ಥಾನವು ಜಗತ್ತಿನಲ್ಲಿಯ ರಾಜರಿಗೆ ಎದುರಾಗುವಷ್ಟು ಸಮರ್ಥವಾಗಿದ್ದಿತು; ಅಸೀರಿಯದ ಸಾಮ್ರಾಜ್ಯವು ಅತ್ಯಂತ ಘನತೆಯ ಸ್ಥಿತಿಯಲ್ಲಿದ್ದಾಗ, ರಾಣಿ ಸೆಮಿರ್‍ಯಾಮಿಸಳು ಹಿಂದುಸ್ಥಾನದ ಮೇಲೆ ದಾಳಿ ಮಾಡಬೇಕೆಂದು ದೊಡ್ಡ ಸೈನ್ಯ ಸ್ಫೂರಣೆ ನಡಿಸಿದಳು; ಈ ಬಗೆಯಾಗಿ ಅವಳು ೩ ವರ್ಷಗಳವರೆಗೆ ಸೈನ್ಯ ಸ್ಫೂರಣೆ ನಡಿಸಿ ಲಕ್ಷಾವಧಿ ಕಾಲಾಳುಗಳೊಂದಿಗೆ, ಮತ್ತು ೫ ಲಕ್ಷ ಕುದುರೆ ಸವಾರರೊಂದಿಗೆ ಎರಡುಸಾವಿರ ಹಡಗಗಳೊಂದಿಗೆ, ಅಲ್ಲದೆ ಆನೆಗಳೊಂದಿಗೆ,

ದಂಡೆತ್ತಿ ಬಂದಳು. ಆದರೆ ಮುಂದೆ ಈ ಅಭಿಯೋಗದಲ್ಲಿ ಸೆಮಿರ್ಯಾಮಿಸಳ ಸೈನ್ಯವು ಪರಾಜಯಹೊಂದಿ ಪಲಾಯನಸೂಕ್ತ ಹೇಳಿತು; ಸೆಮಿರ್ಯಾಮಿಸಳು ಮಡಿದಳು.

ಗಜಸಿಂಹನೆಂಬ ಯದುರಾಜನೊಬ್ಬನು ಅಫಗಾಣಿಸ್ಥಾನದಲ್ಲಿಯ ಗಜನಿಯಲ್ಲಿ ತನ್ನ ತೋಳಿನ ಬಲದಿಂದ ರಾಜ್ಯಸ್ಥಾಪಿಸಿದನು; ಈ ಕಾಲಕ್ಕೆ ತನಗೆ ಎದುರಿಸಿದ ಅನೇಕ ಮುಸಲ್ಮಾನ ರಾಜರನ್ನು ಸೋಲಿಸಿದನೆಂದೂ ಕರ್ನಲ್ ಟಾಡ್ಡರ ರಾಜಸ್ಥಾನದಿಂದ ತಿಳಿಯುತ್ತದೆ.

**ಕರ್ನಲ್ ಟಾಡ್ಡರು ಅನ್ನುವದು:**— ಜಸಲ್ಮೀರದ ಯದು ರಾಜರ ವಂಶಾವಳಿಯನ್ನು ನೋಡಿದರೆ, ವಿಕ್ರಮನಿಗಿಂತ ಪೂರ್ವದಲ್ಲಿ ಅವರು ಗಝನಿಯಿಂದ ಸಮರ್ಕಂದದವರೆಗೆ ಆಳುತ್ತಿದ್ದರೆಂದು ತಿಳಿಯು ತ್ತದೆ. ಇಲ್ಲಿ ಇವರು ಮಹಾಭಾರತಕಾಲದನಂತರ ಒಕ್ಕಲಾಗಿ ನಿಂತರು. ಆದರೆ ಇಸ್ಲಾಮ ಮತದವರಿಂದ ದಬ್ಬಲ್ಪಟ್ಟು ಸಿಂಧು ನದಿಯಗುಂಟ ಮತ್ತೆ ರಜಪುತಸ್ಥಾನಕ್ಕೆ ಬಂದರು. ಒಟ್ಟಾರೆ, ಯದುವಂಶದವರು ಮಧ್ಯ ಏಸಿಯದಲ್ಲಿ ಕೂಡ ಆಳುತ್ತಿದ್ದರು. ಬಾಬರನು ಗಝನಿಯ ವರ್ಣನೆಯಲ್ಲಿ ಅನ್ನುವದು:— ಹಿಂದರಾಯನು ಗಝನಿಯ ಸಬಕ್ತಗೀನನನ್ನು ಮುತ್ತಿ ದಾಗ ಸಬಕ್ತಗೀನನು ಹಿಂದೂಗಳ ಧರ್ಮವನ್ನರಿತು, ದಾರಿಯಲ್ಲಿ ಆಕಳ ಮಾಂಸವನ್ನು ಚಲ್ಲಿಸಿದನು, ಇದಕ್ಕೆ ಹಿಂದೂಜನರು ಹೆದರಿ ಹಿಂದಿರುಗಿದ ರಂತೆ! ಮೇಲ್ಕಾಣಿಸಿದ ಯದುರಾಜರಿಗೂ ಸಿರಿಯಾ ಹಾಗೂ ಬ್ಯಾಕ್ಟ್ರಿಯದ ರಾಜರಿಗೂ ಸ್ನೇಹವಿತ್ತು; ಕ್ರಿ. ಶ. ಪೂ. ೨೧೦ ರಲ್ಲಿ ಅ್ಯಂಟಿಓಕಸನು ಸೋಭಗಸೇನನೆಂಬ ರಾಜನಿಂದ ಕೊಲ್ಲಲ್ಪಟ್ಟನು;"

---

# ೧೩ ನೆಯ ಪ್ರಕರಣ

## ದೇಶಾಂತರಗಳಲ್ಲಿ ಹಿಂದೂಜನರ ಒಕ್ಕಲಗಳು.

**ಸಾವಿರಾರು ವರ್ಷಗಳಾಚೆ ಪ್ರಚಲಿತವಿದ್ದ ಆರ್ಯಸಂಸ್ಕೃತಿಯು ಈಗ್ಯೂ ನಮ್ಮ ಸುತ್ತುಮುತ್ತು ದಿನಾಲು ಸುಳಿದಾಡುತ್ತಿದೆ; ಅಷ್ಟೇ ಅಲ್ಲ; ಅದು ಸುಧಾರಿಸಿದ ಜನಾಂಗದ ಮೂಲೆ ಮೂಲೆಗಳಲ್ಲಿಯೂ ಸೇರಿಕೊಂಡಿದೆ; ಮೊಟ್ಟ ಮೊದಲು ಹಿಂದುಸ್ಥಾನದೊಳಗಣ ಗಂಗಾನದಿಯ ದಂಡೆಯಲ್ಲಿ ಹುಟ್ಟಿದ ಸಂಸ್ಕೃತಿಯು ಈ ಹೊತ್ತು ನಮಗೆ ಅಮೇರಿಕೆಗೆ ಹೋದರೂ ಕಾಣಿಸುತ್ತದೆ; ಯುರೋಪಕ್ಕೆ ಹೋದರೂ ಕಂಗೊಳಿಸುತ್ತದೆ.**

—ಮಿ. ಪೋನ್ಸಿಯರಡೆಲ್‌ಬಾಸ

ಭಾರತೀಯ ಯುದ್ಧವೆಂದರೆ, ಜಗತ್ತಿನ ಇತಿಹಾಸದೊಳಗಿನದೊಂದು ಸಂಕ್ರಾಂತಿಯ ಕಾಲವು; ಭಾರತೀಯ ಯುದ್ಧದಿಂದ ಹಿಂದುಸ್ಥಾನದ ಸಂಪತ್ತಿ ವೈಭವಗಳಿಗೆ ಬಲವಾದ ಪೆಟ್ಟು ತಗಲಿತು; ಆದರಿಂದ ಅನೇಕ ಶತಕಗಳವರೆಗೆ ಹಿಂದೂ ಜನಾಂಗವು ನೆಲಹಿಡಿದು ಬಿದ್ದಿತು; ಭಾರತೀಯ ಯುದ್ಧಕ್ಕಿಂತ ಮುಂಚಿನ ಕಾಲವನ್ನು ನಾವು ನಿರೀಕ್ಷಿಸಿದರೆ, ಹಿಂದೂ ಸಂಸ್ಕೃತಿಯು ಅತ್ಯಂತ ವೈಭವ ಶಿಖರಕ್ಕೇರಿದ್ದು ನಮಗೆ ಕಂಡುಬರುವದು; ಆದರೆ ಮಹಾಭಾರತ ಕಾಲದಿಂದೀಚೆಗೆ ಹತಭಾಗಿಯಾದ ಹಿಂದೂ ದೇಶದಮೇಲೆ ವಾಯವ್ಯ ದಿಕ್ಕಿನಿಂದ ಬರುವ ಕಾಡು ದಾಳಿಗಾರರ ಕಾಕ ದೃಷ್ಟಿಯು ಬಿದ್ದ ಕಾಲದಿಂದೀವರೆಗೂ ಅದರ ಏಳಿಗೆಯೇ ಆಗದಂತಾಗಿದೆ. ಭಾರತೀಯ ಯುದ್ಧದಿಂದ ಎರಡು ವಿಶೇಷ ಪರಿಣಾಮಗಳಾದವು; ಒಂದು, ಅನೇಕರು ಕೊಲ್ಲಲ್ಪಟ್ಟರು; ಎರಡನೇದು, ಅನೇಕರು ದೇಶಾಂತರವಾಸಿಗಳಾದರು; ಭಾರತೀಯಯುದ್ಧಕ್ಕೆ ಮುಂಚೆ ಹಿಂದುಸ್ಥಾನದಿಂದ ಬೇರೆ ದೇಶಕ್ಕೆ ನಮ್ಮ ಜನರು ಒಕ್ಕಲಾಗಿರಲಿಕ್ಕೆ ಹೋಗುತ್ತಿದ್ದಿಲ್ಲವೆಂತಲ್ಲ; ಅನೇಕರು ಹೋಗುತ್ತಿದ್ದರು. ಆದರೆ ಈಸಾರೆ ಭಾರತ ಬಿಟ್ಟು ಪರನಾಡುಗಳಿಗೆ ಒಕ್ಕಲಾಗಿರಲು ಹೋದವರು ಅಲ್ಲಿಯೇ ಸ್ಥಿರವಾಗಿದ್ದುಕೊಂಡು ಅಲ್ಲಿಯವರೇ ಆದರು;

ಇದರಿಂದ ಹಿಂದುಸ್ಥಾನಕ್ಕೆ ಒಂದು ಬಗೆಯಿಂದ ಹಾನಿತಟ್ಟಿ ಇರಾಣದಿಂದ ಬ್ರಿಟನ್ನದ ವರೆಗಿರುವ ಪಾಶ್ಚಾತ್ಯ ಜಗದಲ್ಲಿ ಪೌರ್ವಾತ್ಯ ಸುಧಾರಣೆಯ ಬೀಜಗಳು ಬಿತ್ತಲ್ಪಟ್ಟವು; ಪ್ರತಿಯೊಂದು ಕಾರ್ಮೋಡದ ಅಂಚು ಬೆಳ್ಳಿಯಂತೆ ಹೊಳೆಯುತ್ತಿರುವಂತೆ, ಪ್ರತಿಯೊಂದು ಕೆಟ್ಟ ಕಾರ್ಯಕ್ಕೂ ಒಂದು ಒಳ್ಳೇ ಪರಿಣಾಮವು ಇದ್ದೇ ಇರುತ್ತದೆ; ಅದರಂತೆ ಭಾರತೀಯ ಯುದ್ಧವಾದ ಮೇಲೆ ಅನೇಕ ವೀರರೂ, ಶಾಸ್ತ್ರಸಂಪನ್ನರೂ, ಕೈವಾಡದವರೂ ಹಿಂದುಸ್ಥಾನ ಬಿಟ್ಟು ಹೋದರೂ ತಮ್ಮೊಡನೆ ಈಗಿನ ಪಾಶ್ಚಾತ್ಯ ಕಲೆಯು ಹಾಗೂ ವಿಜ್ಞಾನಶಾಸ್ತ್ರಗಳ ಬೀಜಗಳನ್ನು ಮೊದಲು ಒಯ್ದು ಅಲ್ಲಲ್ಲಿ ಊರಿದರು; ಪಂಜಾಬದಿಂದ ಮುಂದೆ ಮುಂದಕ್ಕೆ ಹೋದವರು ಹಾಗೆಯೇ ಏಸಿಯಾ ಯುರೋಪಕ್ಕೆ ಸಾಗಿದರು.

ಹಿಂದುಸ್ಥಾನಕ್ಕೂ ಬೇರೆ ದೇಶಗಳಿಗೂ ನಡೆದ ಸಂಬಂಧವು ಬಹು ಪುರಾತನ ಕಾಲದ್ದು; ಹಿಂದುಸ್ಥಾನವು ವಿಶಾಲವಾದ ದೇಶವಾದರೂ ಇಲ್ಲಿ ಪ್ರಜಾವೃದ್ಧಿಯಾದಂತೆಲ್ಲ ತತ್ಕಾಲೀನ ಹಿಂದೂ ಜನರಿಗೆ ದೇಶಾಂತರದಲ್ಲಿ ಒಕ್ಕಲಾಗದೆ ಗತ್ಯಂತರವಿರಲಿಲ್ಲ. ಆದುದರಿಂದ ಉತ್ತರ, ಪೂರ್ವ ಹಾಗೂ ಪಶ್ಚಿಮ ದಿಕ್ಕುಗಳಿಗೆ ಹಿಂದೂ ಜನರು ಒಕ್ಕಲಾಗಿರಲಿಕ್ಕೆಂದು ದೇಶಾಂತರಕ್ಕೆ ಹೊರಟರು. ಪೂರ್ವಕ್ಕೆ ಹೋದವರು ಚೀನ, ಆರ್ಕಿಪಿಲಾಗೋ ಹಾಗೂ ಅಮೇರಿಕಕ್ಕೆ ಮುಟ್ಟಿದರು; ಉತ್ತರಕ್ಕೆ ನಡೆದವರು ತುರ್ಕಸ್ಥಾನ, ಸೈಬೀರಿಯಾ, ಸ್ಕ್ಯಾಂಡಿನೇವಿಯಾ, ಜರ್ಮನಿ, ಬ್ರಿಟನ್ನ, ಗ್ರೀಸ ಪರ್ಸಿಯಾ ರೋಮ ಮುಂತಾದ ದೇಶಗಳಿಗೆ ತಲ್ಪಿದರು; ಪಶ್ಚಿಮಕ್ಕೆ ಹೋದವರು ಮೊದಲು ಇಜಿಪ್ತ ಹಾಗೂ ಆಫ್ರಿಕದ ಬೇರೆ ಭಾಗಗಳಿಗೆ ಹೋಗಿ ವಾಸವಾದರು; ಇದರಿಂದ ಇಜಿಪ್ತ, ಪರ್ಸಿಯಾ, ಅಸೀರಿಯಾ, ಗ್ರೀಕ ಮುಂತಾದವರ ಸುಧಾರಗಳಿಗೆಲ್ಲ ಆರ್ಯಸಂಸ್ಕೃತಿಯೇ ತಾಯಿಬೇರು; ಅವರ ಪುರಾಣ ಕಥೆಗಳಿಗೆಲ್ಲ ಹಿಂದೂಪುರಾಣವೇ ಮೂಲವೆಂಬುದು ಎಲ್ಲರಿಗೆ ತಿಳಿಯುವ ಹಾಗಿದೆ. ಪ್ರಾಚೀನ ಕಾಲದ ಇತಿಹಾಸವನ್ನು ಹುಡುಕಿದರೆ, ಇರಾಣಿಯರು, ಹಿಂದೂಜನರು, ಇಜಿಪ್ತರು ಒಂದು ವರ್ಷದೊಳಗೆ ೧೨ ತಿಂಗಳು, ೩೬೫¼ ದಿನಗಳು, ದಿನಕ್ಕೆ ೨೪ ತಾಸುಗಳು, ವಾರಕ್ಕೆ ೭ ದಿನಗಳಿಂತು ವಿಂಗಡಿಸಿದ್ದು ಕಂಡುಬರುತ್ತದೆಯಾದರೂ ಎಲ್ಲಕ್ಕೂ ಮೊದಲು

ಇವರಲ್ಲಿ ಯಾರಾದರೂ ಒಬ್ಬರು ತಮಗಿಂತ ಸುಧಾರಿಸಿದವರಿಂದ ಇದನ್ನೆಲ್ಲ ತಿಳಿದುಕೊಂಡಿರಲಿಕ್ಕೆಬೇಕೆಂಬುದು ಖಂಡಿತ; ಮತ್ತು ಆ ಸುಧಾರಿಸಿದ ಪ್ರಾಚೀನ ಜನಾಂಗವೆಂದರೆ ಹಿಂದೂದೇಶವೇ ಎಂದೂ, ಅದುವೇ ಮಿಕ್ಕ ಜನಾಂಗಗಳಿಗೆಲ್ಲ ತಾಯಿ ಎಂದೂ ದೊಡ್ಡ ದೊಡ್ಡ ಗ್ರಂಥಕರ್ತರು ಸಿದ್ಧ ಮಾಡಿರುವರು.

**ಕರ್ನಲ ಅಲ್ಕಾಟರನ್ನುವದು:—** ಇತ್ತೀಚಿನ ಭಾಷಾಶಾಸ್ತ್ರಜ್ಞರೂ ಆರ್ಯಸಂಸ್ಕೃತಿಯೇ ಮೊದಲು ಯುರೋಪದೊಳಗೆ ಹರಡಿತ್ತೆಂದು ಸಂಸ್ಕೃತ ಮುಂತಾದ ಭಾಷೆಗಳ ತುಲನಾತ್ಮಕ ಅಭ್ಯಾಸದಿಂದ ನಿಶ್ಚಯಿಸಿದ್ದಾರೆ; ಅಲ್ಲದೆ ಆರ್ಯರ ವಿಚಾರಗಳು ಬಾಬಿಲೋನಿಯಾ, ಇಜಿಪ್ತ, ರೋಮ ಮಾರ್ಗವಾಗಿ ಉತ್ತರ ಯುರೋಪಕ್ಕೆ ಹಬ್ಬಿರಬಹುದೆಂದೂ ತರ್ಕಿಸಲು ಆಸ್ಪದವಿದೆ. ಇದನ್ನೆಲ್ಲ ಸಿದ್ಧಪಡಿಸಬೇಕೆಂದರೆ, ಪಾಯಥಾಗೋರಾಸ, ಸಾಕ್ರೆಟಿಸ, ಪ್ಲೆಟೋ, ಅರಿಸ್ಟಾಟಲ್, ಹೋಮರ ಮುಂತಾದವರ ವಾಙ್ಮಯವನ್ನೂ ವೇದವ್ಯಾಸ, ಕಪಿಲ, ಗೌತಮ, ಪತಂಜಲಿ, ಕಣಾದ, ಜೈಮಿನಿ, ನಾರದ, ಪಾಣಿನಿ ಮುಂತಾದವರ ಗ್ರಂಥಗಳನ್ನೂ ನಾವು ಎಡಬಲಕ್ಕಿಟ್ಟುಕೊಂಡು ಸರಿಹಚ್ಚಿ ಓದಿದರೆ, ಅವರಲ್ಲಿ ನಮಗೆ ವಿಚಾರೈಕ್ಯ ಹಾಗೂ ವಿಚಾರ ಸಾಮ್ಯವಿದ್ದುದೂ ಪಾಶ್ಚಾತ್ಯ ತತ್ವಜ್ಞಾನವು ಪೌರ್ವಾತ್ಯರಿಗಿಂತ ವಯಸ್ಸಿನಿಂದ ಚಿಕ್ಕದಿದ್ದುದೂ ಕಂಡುಬಂದು ಆಶ್ಚರ್ಯವೆನಿಸುವದು.

**ಸರ ವಿಲಿಯಮ ಜೋನ್ಸ:—** "ಹಿಂದೂಜನರ ಎಲ್ಲ ವಾಙ್ಮಯ ಸಂಪತ್ತಿಯನ್ನೋದಿದರೆ, ಅವರಿಗೂ ಇರಾಣ, ಇಜಿಪ್ತ, ಫಿನಿಸಿಯಾ, ಗ್ರೀಕ, ಟಸ್ಕನ ಸಿಥಿಯನ್, ಚೀನ, ಜಪಾನ ಮುಂತಾದ ಜನಾಂಗದವರಿಗೂ ಅನಾದಿಕಾಲದಿಂದ ಸಂಬಂಧವಿದ್ದಂತೆ ಕಾಣುತ್ತದೆ."

**ಇಜಿಪ್ತ ಮತ್ತು ಏಥಿಯೋಪಿಯಾ:—** ಇಜಿಪ್ತವು ಎಲ್ಲಕ್ಕೂ ಮೊದಲು ಹಿಂದೂ ಜನರ ಒಕ್ಕಲನಾಡು. ೭–೮ ಸಾವಿರ ವರ್ಷಗಳಾಚೆ ಹಿಂದುಸ್ಥಾನದಿಂದ ಕೆಲಜನರು ಇಜಿಪ್ತಕ್ಕೆ ಒಕ್ಕಲಾಗಿರಲು ಹೋದರು ಮುಂದೆ ಅವರೇ ಅಲ್ಲಿ ನಿಂತುಕೊಂಡು ಬಲಾಢ್ಯ ಸಾಮ್ರಾಜ್ಯಗಳನ್ನು ಕಟ್ಟಿದರೆಂದು ತಿಳಿಯುತ್ತದೆ. ಇಜಿಪ್ತದ ಆಧುನಿಕ ಪ್ರಾಚ್ಯಸಂಶೋಧಕನಾದ ಮಿ. ಬೇ ಎಂಬವನು ಕಂಡ ಇಜಿಪ್ತದ ಪ್ರಾಚೀನ ಇತಿಹಾಸವನ್ನು ಪ್ರಾಚೀನ

ಹಿಂದೂ ಜನರು ಒಕ್ಕಲಾಗಿದ್ದ ಸಂಗತಿಗೆ ಬಲವನ್ನು ಕೂಡಿಸುತ್ತಾನೆ; ಇಜಿಪ್ತ ದವರೇ ತಮ್ಮ ಪ್ರಾಚೀನರು ಹಿಂದೂ ಮಹಾಸಾಗರದ ಹತ್ತರಿನ ದೇಶದಿಂದ ಬಂದರೆಂದು ಹೇಳುವದುಂಟು; ಇಜಿಪ್ತಕ್ಕೆ ಪ್ರಾಚೀನ ಹಿಂದೂಜನರು ಹೋಗಿ ಒಕ್ಕಲಾದ ತರುವಾಯ ಅಲ್ಲಿದ್ದುಕೊಂಡು ಹಿಂದುಸ್ಥಾನದೊಡನೆ ಅನೇಕದಿವಸ ವ್ಯಾಪಾರ ನಡೆಸಿದರು; ಅವರ ಆ ಪ್ರಾಚೀನ ಶಬ್ದಭಾಂಡಾರ ವನ್ನು ಹುಡುಕಿದರೆ, ನಮಗೆ ಹಿಂದುಸ್ಥಾನದೊಳಗಿರುವ ಮುಖ್ಯ ಮುಖ್ಯ ತರದ ಕಟ್ಟಿಗೆಗಳ ಹೆಸರುಗಳೇ ಕಂಡುಬರುತ್ತವೆ; ಇದರಿಂದ ಇಜಿಪ್ತ ಸಂಸ್ಕೃತಿಯೆಂಬುದು ಆರ್ಯಸಂಸ್ಕೃತಿಯು ಮಗುವೆಂದೆನ್ನಲಿಕ್ಕೇನೂ ಸಂಶಯವುಳಿಯದು.

'ಗ್ರೀಸದಲ್ಲಿ ಹಿಂದುಸ್ಥಾನ' ಎಂಬ ಪುಸ್ತಕದ ಕರ್ತರು ಒಂದೆಡೆಯಲ್ಲಿ ಹೀಗೆ ಬರೆದಿದ್ದಾರೆ. "ಸಿಂಧೂ ನದಿಯ ದಂಡೆಯಲ್ಲಿ ಜಾಣರೂ ಚಪಲರೂ ಸಾಹಸಿಗಳೂ ಆದ ಸಮುದ್ರವ್ಯಾಪಾರಿಗಳಿದ್ದರು; ಅವರು ಕಾಲಾಂತರದಲ್ಲಿ ವ್ಯಾಪಾರದ ನಿಮಿತ್ತವಾಗಿ ದೇಶಾಂತರ ತಿರುಗಾಡುತ್ತ ಪಂಜಾಬದಿಂದ ಗ್ರೀಸಕ್ಕೆ ಬಂದು ಇಲ್ಲಿ ತಮ್ಮ ಸಂಸ್ಕೃತಿಯನ್ನು ಹರಡಿದರು." ಸಾಕ್ರೆಟೀಸನ ಕಾಲಕ್ಕೆ ಬ್ರಾಹ್ಮಣರು ಅಥೆನ್ಸಕ್ಕೆ ಹೋಗುತ್ತಿದ್ದರೆಂದು ಮ್ಯಾಕ್ಸಮುಲ್ಲರರು ಅಭಿಪ್ರಾಯಪಟ್ಟಿದ್ದಾರೆ; ಇಷ್ಟೇಅಲ್ಲದೆ ಹಿಂದೂದೇಶದ ಒಬ್ಬ ತತ್ವಜ್ಞಾನಿಯು ಅಥೆನ್ಸಕ್ಕೆ ಹೋದಾಗ ಸಾಕ್ರೆಟೀಸನೊಡನೆ ಅವನ ಚರ್ಚೆನಡೆಯಿತೆಂದೂ ಸಾಕ್ರೆಟೀಸನು " ತನ್ನ ತತ್ವಜ್ಞಾನವೆಂದರೆ ಮನುಷ್ಯಜೀವನದ ಬಗ್ಗೆ ಚರ್ಚೆ ಮಾಡುವದೇ" ಎಂದೂ ಹೇಳಿದಾಗ ಆ ಭಾರತೀಯ ತತ್ವಜ್ಞನು ನಸುನಕ್ಕು "ದೈವಿಕ ಸಂಗತಿಗಳನ್ನರಿಯದವನು ಮಾನವೀ ಸಂಗತಿಗಳನ್ನರಿಯಲಾರನು" ಎಂದು ನುಡಿದನಂತೆ !

ಈ ಬಗ್ಗೆ ಐತಿಹಾಸಿಕ ಆಧಾರಗಳಲ್ಲದೆ, ಶಾರೀರಿಕ ದೃಷ್ಟಿಯಿಂದ ಅವ ಲೋಕಿಸಿದರೂ, ಇಜಿಪ್ತರೂ ಹಿಂದೂಜನರೇ ಎಂಬುದು ದೃಢವಾಗುತ್ತದೆ; **ಪ್ರೊ. ಹೀರನರು**:-"ಇಜಿಪ್ತರ ಹಾಗೂ ಹಿಂದೂಜನರ ಮೈಬಣ್ಣ ಹಾಗೂ ತಲೆಯ ಆಕಾರ ಮುಂತಾದವುಗಳಲ್ಲಿ ಸಾಮ್ಯವಿದ್ದುದನ್ನು ಕಂಡು ನನಗೆ ಆಶ್ಚರ್ಯವಾಯಿತು. ಇಜಿಪ್ತದೇಶದ ಮಮಿಯ ತಲೆಯ ಬುರುಡೆ ಹಾಗೂ ಬಂಗಾಲದ್ದೊಂದು ತಲೆಬುರುಡೆ ಇವೆರಡನ್ನೂ ಒಂದಕ್ಕೊಂದು ಹಚ್ಚಿನೋಡಿ

ದರೆ, ಅವೆರಡನ್ನು ಬೇರ್ಪಡಿಸುವದು ಅಸಾಧ್ಯವಾಗುವದು; ನಾನು ಪರೀಕ್ಷಿಸಿದ ಅನೇಕ ತಲೆಬುರುಡೆಗಳಲ್ಲಿ ಇವೆರಡೇ ಒಂದನ್ನೊಂದು ಹೋಲುತ್ತವೆ."

ಆಫ್ರಿಕಾದೊಳಗಿನ ಅಬೀಸೀನಿಯಾ, ನ್ಯೂಬಿಯಾ ಮುಂತಾದ ಭಾಗಗಳಿಗೆಲ್ಲ ಮುಂಚೆ ಏಥಿಯೋಪಿಯಾ ಅನ್ನುತ್ತಿದ್ದರು; ಅದುಕೂಡ ಆರ್ಯರಿಂದಲೇ ಎಲ್ಲಕ್ಕೂ ಮೊದಲು ಒಕ್ಕಲಾಯ್ತೆಂದು ತಿಳಿಯುತ್ತದೆ. ಆಫ್ರಿಕಾದೊಳಗಿನ ಅನೇಕ ಊರುಗಳ ಹೆಸರುಗಳು ಈಗಲೂ ಸಂಸ್ಕೃತವಿರುವವೆಂದೂ ಅವು ಈಗ ಹಿಂದುಸ್ಥಾನದಲ್ಲಿ ರೂಢಿಯಲ್ಲಿರುವ ಹೆಸರುಗಳಂತೆ ಇರುವವೆಂದೂ ಏಸಿಯಾ ಜರ್ನಲದಲ್ಲಿ ಒಬ್ಬರು ಒಂದು ಲೇಖ ಬರೆದಿರುವರು.

ನಾಲ್ಕನೇ ಶತಕದ ಪ್ರಾರಂಭದಲ್ಲಿ ಆಗಿಹೋದ **ಝೆನಬ್** ಎಂಬ ಹೆಸರಿನ ಆರ್ಮೀನಿಯದ ಇತಿಹಾಸಗಾರನು ಬರೆದಿಟ್ಟ ಒಂದು ಇತಿಹಾಸದಲ್ಲಿ ಕಣ್ಣಾರೆ ಕಂಡ ಕೆಳಗಿನ ಸಂಗತಿಯು ಇದೆ:— "ಆರ್ಮೀನಿಯದಲ್ಲಿ ಕ್ರಿ. ಶ. ಪೂ- ೨ನೇ ಶತಮಾನದಿಂದ ಕ್ರಿ. ಶ. ೪ನೇ ಶತಕದವರೆಗೂ ಅಂದರೆ ಸುಮಾರು ೪೫೦ ವರ್ಷಗಳವರೆಗೆ ಹಿಂದೂಗಳು ಒಕ್ಕಲಾಗಿದ್ದರು; ಅವರು ಅಲ್ಲಿ ಪಟ್ಟಣಗಳನ್ನೂ ದೇವಾಲಯುಗಳನ್ನೂ ಕಟ್ಟಿದ್ದಲ್ಲದೆ, ಸ್ವತಂತ್ರವಾಗಿ ತಮ್ಮ ಸಂಸ್ಕೃತಿಯನ್ನು ಕಾಯ್ದುಕೊಂಡು ಬಾಳಿದ್ದರು; ಆದರೆ ಕೊನೆಗೆ ಅವರು ಜಾತಿಗೆಟ್ಟು ಕ್ರಿಸ್ತರಾದರು; ಇದಕ್ಕೆ ಕ್ರಿಸ್ತರ ಹಾವಳಿ, ಕ್ರಿಸ್ತರು ಹಿಂದೂ ದೇವಾಲಯುಗಳನ್ನು ಹಾಳುಮಾಡಿ, ಹಿಂದೂ ಧರ್ಮೋಪದೇಶಕರ ಕೊಲೆಮಾಡಿದ್ದೇ ಕಾರಣವೆಂದೂ, ಕ್ರಿಸ್ತರು ಆ ಕಾಲಕ್ಕೆ ಹಿಂದೂ ಹೆಂಗಸರು ಮಕ್ಕಳನ್ನಲ್ಲದೆ ೫೦೫೦ ಮಂದಿ ಗಂಡಸರನ್ನೇ ಭ್ರಷ್ಟಗೊಳಿಸಿದರು."

**ಇರಾಣ**:— ಉತ್ತರದ ಹಿಂದೂಜನರೇ ಇರಾಣಕ್ಕೆ ಹೋಗಿ ಒಕ್ಕಲಾದರೆಂಬುವ ಸಂಗತಿಯನ್ನು ಕುರಿತು ಈ ವರೆಗೆ ಅನೇಕ ಗ್ರಂಥಕರ್ತರು ಸಿದ್ಧಪಡಿಸಿರುವರು; ಪಾರ್ಶಿಗಳಿಗೆ ನಮ್ಮಲ್ಲಿ ಪಾರಶಿಕರೆಂದು ಹೆಸರು ಕಂಡುಬರುತ್ತದೆ; ಹಿಂದುಸ್ಥಾನದೊಳಗಿದ್ದಾಗ ಇವರು ಕ್ಷತ್ರಿಯ ಜಾತಿಗೆ ಸೇರಿದ್ದರೆಂದೂ ಮುಂದೆ ಬರಬರುತ್ತ ಶೂದ್ರಸ್ಥಿತಿಗೆ ಹೋದರೆಂದೂ ಮನುಸ್ಮೃತಿಯಿಂದ ತಿಳಿಯುತ್ತದೆ; ಈ ತರಹದ ಜಾತಿಗಳಲ್ಲಿ ಪೌಂಡ್ರಕ, ಓಡ್ರ, ದ್ರವಿಡ, ಕಾಂಬೋಜ, ಯವನ, ಶಕ, ಪಾರದ, ಪಲ್ಲವ, ಚೀನ,

ಕಿರಾತ, ದರದ, ಖಶ ಮುಂತಾದವರನ್ನೂ ಮನುವು ಸೇರಿಸಿದ್ದಾನೆ.

ಮಿ. ಹಾಗ್ ಎಂಬುವರು ಪಾರ್ಶೀ ಜನರ ಧರ್ಮವನ್ನು ಕುರಿತು ಒಂದು ಪ್ರಬಂಧ ಬರೆದಿದ್ದು, ಅದರಲ್ಲಿ ಬ್ರಾಹ್ಮಣಧರ್ಮಕ್ಕೂ ಅದಕ್ಕೂ ಸರಿ ಹಚ್ಚಿ, ಒಂದಾನೊಂದು ಕಾಲಕ್ಕೆ ಪಾರ್ಶೀಧರ್ಮ, ನಡೆನುಡಿ ಮುಂತಾದವುಗಳು ಬ್ರಾಹ್ಮಣರಂತೆ ಇದ್ದವೆಂದು ಸಾಧಿಸಿದ್ದಾರೆ; ಅದರಲ್ಲಿ ಅವರು ದೇವತೆಗಳ ಹೆಸರು, ವೀರರ ಹೆಸರು, ಯಜ್ಞಸಂಸ್ಕಾರಗಳು, ಇವನ್ನೇ ಋಗ್ವೇದ ಹಾಗೂ ಝೆಂದಅವೆಸ್ತಾದೊಳಗಿಂದ ಅವತರಣಿಕೆಗಳೊಂದಿಗೆ ಕೊಟ್ಟಿದ್ದಾರೆ. ಹಿಂದೂ ಜನರು ಸರಿಯಾಗಿ ಇಂಥ ಕಾಲದಲ್ಲಿಯೇ ಇರಾಣಕ್ಕೆ ಹೋಗಿ ಒಕ್ಕಲಾದ ರೆಂಬುದನ್ನು ಹೇಳುವದು ಸಾಧ್ಯವಾದ ಮಾತಲ್ಲ; ಆದರೂ ಮಹಾಭಾರತ ಕಾಲಕ್ಕೆ ಮುಂಚಿತವಾಗಿಯೇ ಅವರು ಅಲ್ಲಿಗೆ ಹೋಗಿರಲಿಕ್ಕೆಬೇಕು. ಪಾರ್ಶೀಜನರ ಆದ್ಯಗುರುವಾದ ಝೋರೋಸ್ತ್ರರಸು ಹಿಂದೂಜನರು ಪರ್ಶಿಯಾಕ್ಕೆ ಹೋಗಿ ಒಕ್ಕಲಾದಮೇಲೆಯೇ ಹುಟ್ಟಿದನು. ಯಾಕಂದರೆ, ವೇದ ವ್ಯಾಸರು ತುರ್ಕಸ್ಥಾನದೊಳಗಿನ ಬಾಲ್ಕ ಎಂಬಲ್ಲಿ ಝೋರೊಸ್ತ್ರರನೊಡನೆ ದೊಡ್ಡ ಧಾರ್ಮಿಕ ಚರ್ಚೆನಡಿಸಿದ್ದರೆಂಬುದರ ಮೇಲಿಂದ ಅವರೀರ್ವರೂ ಸಮಕಾಲೀನರಾಗುವರು. ಪಾರ್ಶೀ ಜನರಂತೆಯೇ ಬಾಬಿಲೋನಿಯನ್ನರೂ ಅಸೀರಿಯರೂ ಹಿಂದುಸ್ಥಾನದ ಮೂಲನಿವಾಸಿಗಳೆಂದೂ ಅವರ ಸಂಸ್ಕೃತಿಗೆ ಆರ್ಯಸಂಸ್ಕೃತಿಯೇ ಉಗಮವೆಂದೂ ಸಿದ್ಧವಾಗಿಹೋದ ಮಾತಾಗಿದೆ.

**ಸರ ವಿಲಿಯಂ ಜೋನ್ಸ್ರು:—** ಪರ್ಸಿಯನ್ ಭಾಷೆಯ ಶಬ್ದ ಕೋಶದೊಳಗಿನ ೧೦ ಶಬ್ದಗಳಲ್ಲಿ೬–೭ ಶಬ್ದಗಳು ಶುದ್ಧ ಸಂಸ್ಕೃತವಾಗಿದ್ದು ದನ್ನು ಕಂಡು ನನಗೆ ಆಶ್ಚರ್ಯವಾಯಿತು. ಎಂದು ನುಡಿದಿರುವರು.

**ತುರ್ಕಸ್ಥಾನ ಹಾಗೂ ಉತ್ತರ ಏಶಿಯಾ–** ಹಿಂದೂಪುರಾಣಗಳಲ್ಲಿ ತುರುಷ್ಕ ಎಂಬ ಶಬ್ದವನ್ನು ನಾವು ಓದುವದುಂಟು. ಅದೇ ಈಗ ನಾವು ತುರ್ಕ ಎಂದು ಕರೆಯುವ ಶಬ್ದದ ತದ್ಭವವು.

**ಕರ್ನಲ್ ಟಾಡರನ್ನುವದು:—** ಚಂದ್ರವಂಶದ ಯದುಗಳು ಭಾರತೀಯ ಯುದ್ಧವಾದನಂತರ ಖೋರಾಸಾನ ಪ್ರಾಂತವನ್ನಾಳಿದರು. ಸೂರ್ಯ ಹಾಗೂ ಚಂದ್ರವಂಶದ ಅರಸರು ತಮ್ಮ ದೇಶದಲ್ಲಿ ಹೆಚ್ಚಾದ ಜನರನ್ನು ದೂರದೂರಿನ ದೇಶಗಳಿಗೆ ಕಳಿಸುತ್ತಿದ್ದರು.

ಅದೇ ಕಾಲಕ್ಕೆ ಒಂದು ಗುಂಪು ಸೈಬೀರಿಯಾಕ್ಕೆ ಹೋಗಿ, ಅಲ್ಲಿ ಒಕ್ಕಲಾಗಿದ್ದು, ತಮ್ಮದೊಂದು ರಾಜ್ಯವನ್ನೇ ಅವರು ಸ್ಥಾಪಿಸಿ ಅದರ ರಾಜಧಾನಿಗೆ ವಜ್ರಪುರ ಎಂದು ಹೆಸರಿಟ್ಟರು. ಸೈಬಿರಿಯಾ ಹಾಗೂ ಫಿನಲಂಡದ ವರಿಗೆ ಜ್ಯಾರುಸಾಮ ಯದುಗಳೆಂದು ಹೆಸರು. ಸಾಮ ಎಂಬುದು ಶಾಮ ಶಬ್ದದ ತದ್ಭವ. ಆ ದೇಶದ ರಾಜನು ಯಾವುದೋ ಒಂದು ಕಾಳಗದಲ್ಲಿ ಮಡಿಯಲು, ಶ್ರೀಕೃಷ್ಣನ ಹಿರಿಯ ಮಕ್ಕಳಾದ ಸಾಂಬ ಮುಂತಾದ ಮೂವರು ಅನೇಕ ಬ್ರಾಹ್ಮಣ ಕ್ಷತ್ರಿಯರನ್ನೊಡಗೊಂಡು ಹೋಗಿ ಅಲ್ಲಿಯ ಪಟ್ಟವನ್ನು ಹಿಡಿದುಕೊಂಡು ಹಿರಿಯವನಿಗೆ ಪಟ್ಟಗಟ್ಟಿದರೆಂದು ಹರಿವಂಶದಿಂದ ತಿಳಿಯುತ್ತದೆ; ಮುಂದೆ ಕೃಷ್ಣನ ಮಕ್ಕಳು ಸಿಂಧುನದಿಯ ದಂಡೆಯನ್ನು ಬಿಟ್ಟು ಜಬುಲಸ್ಥಾನದೊಳಗಿಂದ ಹಾಯ್ದು ಸಮರ್ಕಂದದವರೆಗಿನ ಪ್ರದೇಶಗಳಿಗೆ ಹೋಗಿ ವಾಸವಾದರು. ಗಝ್ನಿಯಿಂದ ಸಮರ್ಕಂದವರೆಗಿನ ಪ್ರದೇಶವೆಲ್ಲ ಜಸಲ್ಮೀರದ ಯದುವಂಶಜರ ಕೈಯಲ್ಲಿತ್ತೆಂದೂ ಈ ರಾಜ್ಯವನ್ನು ಹಿಂದೂಗಳು ಮಹಾಭಾರತಯುದ್ಧವಾದನಂತರ ಸ್ಥಾಪಿಸಿದರೆಂದೂ ಜಸಲ್ಮೀರದ ಯದುವಂಶದಿಂದ ತಿಳಿಯುತ್ತದೆ. ಜಸಲ್ಮೀರದ ರಾಜರು ಚಂದ್ರವಂಶಕ್ಕೆ ಸಂಬಂಧಿಕರೆಂದು ಹೇಳುವದುಂಟು.

**ಅಫಗಾಣಿಸ್ತಾನಕ್ಕೆ** ಮೊದಲು ಅಶ್ವಗಣವೆಂದು ಹೆಸರಿತ್ತು; ಅಫಗಾಣಿಸ್ಥಾನದಲ್ಲಿರುವವರು ಅಹಿವಂಶದ ನಾಗಕುಲಕ್ಕೆ ಸೇರಿದವರೆಂದೂ ಹೇಳುವದುಂಟು; ಅಫಗಾಣಿಸ್ಥಾನವು ಅನೇಕ ಶತಕಗಳಿಂದ ಹಿಂದುಸ್ಥಾನಕ್ಕೆ ಸೇರಿದ ದೇಶವಿದ್ದು, ಅಲ್ಲಿ ಹಿಂದೂ ಅರಸರೇ ಆಳುತ್ತಿದ್ದರು; ಗಾಂಧಾರಿಯು ಕಂದಹಾರದ ಅರಸನ ಮಗಳು; ಅಲೆಕ್ಸಾಂಡರನ ಕಾಲಕ್ಕೂ ಅದು ಹಿಂದುಸ್ಥಾನದ ಒಂದು ಭಾಗವಾಗಿತ್ತು; ಹಿಂದೂ ಅರಸರು ಅಲ್ಲಿ ಕ್ರಿ. ಶ. ೬ ನೇ ಶತಮಾನದ ಕೊನೆಯವರೆಗೆ ಆಳಿದರು.

**ಸ್ಕ್ಯಾಂಡಿನೇವ್ಹಿಯಾ:—** ಸ್ಕ್ಯಾಂಡಿನೇವ್ಹಿಯಾದವರೂ ಹಿಂದೂ ಕ್ಷತ್ರಿಯರು; 'ಸ್ಕಂದ–ನಾಭ' ಈ ಶಬ್ದದಿಂದ ಸ್ಕಂದನಾವಿ ಹೀಗೆ ರೂಪಾಂತರವಾಗಿ ಈಗಿನ ಹೆಸರು ಬಂದಿದೆ. ಯುರೋಪವೆಂಬ ಹೆಸರಿಗೆ ಸರೂಪವೆಂಬ ಹೆಸರೇ ಮೂಲವೆಂದು ಕರ್ನಲ್‌ಟಾಡ್ಡರು ತಮ್ಮ ರಾಜಸ್ಥಾನದ ಇತಿಹಾಸದಲ್ಲಿ ಹೇಳುವರು. ಸ್ಕ್ಯಾಂಡಿನೇವಿಯದ ಜನರು ಪವಿತ್ರ

ಧಾರ್ಮಿಕ ಗ್ರಂಥಕ್ಕೆ ಎಡ್ಡಾ ಎನ್ನುತ್ತಿದ್ದರು. ಎಡ್ಡಾ ಎಂಬುದು ವೇದದ ಅಪಭ್ರಷ್ಟ ಹೆಸರು. ಅವರ ಭಾಷೆಯೊಳಗಿನ ವಾರಗಳು ಸಂಸ್ಕೃತದೊಳಗಿನ ವಾರಗಳಿಗೆ ಹೊಂದುತ್ತವೆ. ಮೇಲಾಗಿ ಅವರ ಪುರಾಣಗಳಿಗೂ ಹಿಂದೂ ಪುರಾಣಗಳಿಗೂ ಸಾಮ್ಯವಿದೆ.

**ಜರ್ಮನಿ:—** ಜರ್ಮನಿಯ ಪ್ರಾಚೀನರು ಕೂಡ ಹಿಂದೂಜನರೇ. ಈ ಬಗ್ಗೆ ಮಿ. ಮ್ಯಾಕ್ಸಮುಲ್ಲರ ಎಂಬ ದೊಡ್ಡ ಗ್ರಂಥಕಾರರು ಅನ್ನುವದು:— ಆರ್ಯರ ಮೂಲ ಪುರುಷನು ಮನುವು; ಜರ್ಮನರು ಮನುಷ್ಯನೆನ್ನುವ ಮ್ಯಾನ್ ಶಬ್ದಕ್ಕೂ ಸಂಸ್ಕೃತ ಮನುಷ್ಯ ಶಬ್ದಕ್ಕೂ ಬಲು ಸಾಮ್ಯವಿದೆ. ಜರ್ಮನಿಯ ಪೂರ್ವಜರು ಆರ್ಯರಂತೆ ನಿಲುವಂಗಿಯನ್ನು ಹಾಕಿಕೊಳ್ಳುತ್ತಿದ್ದರಲ್ಲದೆ, ಅವರಂತೆ ಜಟೆಯನ್ನು ಕಟ್ಟುತ್ತಿದ್ದರು. ಜರ್ಮನರು ಹಿಂದೂ ದೇಶದ ಬ್ರಾಹ್ಮಣರ ಪೀಳಿಗೆಯವರಿರಬಹುದು; ಆದುದರಿಂದ ಜರ್ಮನ ಎಂಬ ಶಬ್ದವು ಶರ್ಮನ್ ಈ ಹೆಸರಿನ ರೂಪಾಂತರವಾಗಿದೆ.

**ಬ್ರಿಟಿನನು.—** ಪ್ರಾಚೀನ ಬ್ರಿಟನ್ನದಲ್ಲಿದ್ದ ಡ್ರುಯಿದರು ಬುದ್ಧ ಬ್ರಾಹ್ಮಣಕುಲಕ್ಕೆ ಸೇರಿದವರೆಂದು ಕಾಣುತ್ತದೆ; ಆತ್ಮನು ಅಮರನೆಂದು ಅವರು ತಿಳಿಯುತ್ತಿದ್ದರು; ಹಿಂದೂಜನರಂತೆ, ದೇವರು ಹುಟ್ಟಿಸುವ, ರಕ್ಷಿಸುವ, ಹಾಗೂ ನಾಶಮಾಡುವ ಕೆಲಸಮಾಡುವನೆಂದು ಅವರ ನಂಬಿಗೆಯಿತ್ತು. ಮಿ. ಗಾಡ್ಪ್ರೆ ಹಿಗಿನ್ಸ ಎಂಬವರು ಸೆಲ್ಟಿಕ್ ಡ್ರುಯಿಡ್ಸ ಎಂಬುದೊಂದು ಪುಸ್ತಕ ಬರೆದದ್ದು, ಈ ಡ್ರುಯಿಡರು ಹಿಂದುಸ್ಥಾನದಿಂದ ಬ್ರಿಟನ್ನಕ್ಕೆ ಬಂದು ಒಕ್ಕಲಾಗಿದ್ದವರ ಪುರೋಹಿತರಿದ್ದರೆಂದು ಹೇಳಿರುವರು.

**ಪೂರ್ವಏಶಿಯಾ:—** ಹಿಂದೂದೇಶದಿಂದ ಪೂರ್ವ ದಿಕ್ಕಿನ ಸಿಟ್ಟಿನಿಂದ ದೇಶಾಂತರಕ್ಕೆ ಹೋಗಲು ಹೊರಟವರು ಚೀನ ಜರ್ಮನಿ, ಆಸ್ಟ್ರೇಲಿಯಾ, ಆರ್ಚಿಪೇಲಾಗೋ ಮುಂತಾದ ದೇಶಗಳಿಗೆ ಹೋಗುತ್ತ ಕೊನೆಗೆ ಅಮೇರಿಕೆಗೆ ತಲ್ಪಿದರು. ಒಂದಾನೊಂದುಕಾಲಕ್ಕೆ ಚೀನ, ಜಪಾನ ಮುಂತಾದ ದೇಶಗಳು ಧಾರ್ಮಿಕ, ನೈತಿಕ, ಸಾಮಾಜಿಕ ಹಾಗೂ ರಾಜಕೀಯ ದೃಷ್ಟಿಗಳಿಂದ ಹಿಂದುಸ್ಥಾನದ ಭಾಗಗಳೇ ಇದ್ದ ಮೂಲಕ ಹಿಂದೂ ಸಂಸ್ಕೃತಿಯೇ ಎಲ್ಲ ಬಗೆಯಿಂದ ಅವರಲ್ಲಿ ಸಂಪೂರ್ಣವಾಗಿ ಒಡಮೂಡಿತ್ತೆನ್ನಲಿಕ್ಕೇನೂ ಅಡ್ಡಿಯಿಲ್ಲ; ಮತ್ತು ಅವು ಈಗಲೂ ಆಯಾ ದೇಶದವರಲ್ಲಿ ರೂಪಾಂತರದಿಂದ

ಹೆಚ್ಚುಕಡಿಮೆ ಕಾಣಿಸುತ್ತವೆ.

ಚೀನ ದೇಶವೇ ಗೌತಮ ಬುದ್ಧನ ಮತವನ್ನವಲಂಬಿಸಿತು; ಅಂದಿನಿಂದ ಅದು ಹಿಂದುಸ್ಥಾನದೊಡನೆ ಧರ್ಮದ ವಿಷಯದಲ್ಲಿ ಪ್ರತಿಸ್ಪರ್ಧಿಯಾಗಿ ನಿಂತಿತು; ಹೀಗಾಗಿ ಏಶಿಯಾದಲ್ಲಿಯ ಬೇರೆ ಬೇರೆ ಜನಾಂಗದವರು ಇದುವರೆಗೆ ವಿದ್ಯೆ ಹಾಗೂ ಧರ್ಮಶಿಕ್ಷಣೆಗಾಗಿ ಏಸಿಯಾದ ಕಡೆಗೆ ನೋಡುತ್ತಿದ್ದವರು ಬಹು ಮಟ್ಟಿಗೆ ಚೀನವನ್ನೇ ಅವಲಂಬಿಸಿದರು; ಏನೆಂದರೂ ಚೀನರ ರಾಜಕೀಯ ಹಾಗೂ ಸಾಮಾಜಿಕ ನಡೆನುಡಿಗಳು ಹಿಂದೂ ಸಂಸ್ಕೃತಿಯ ಪಡಿಯಚ್ಚಿನಲ್ಲಿಯೇ ಎಷ್ಟೋ ದಿನಗಳವರೆಗೆ ಬೆಳೆದಿದ್ದುದರಿಂದ ಹಿಂದೂ ಸಂಸ್ಕೃತಿಯ ಮುದ್ರೆಯನ್ನು ಪೂರಾ ಅಳಿಸುವದು ಸಾಧ್ಯವಿರಲಿಲ್ಲ; ಆದುದರಿಂದ ಕೊನೆಯವರೆಗೂ ಅವರೆಲ್ಲರ ಸಂಸ್ಕೃತಿಯ ತಳದಿಹಯು ಹಿಂದುವಾಗಿಯೇ ಉಳಿದು ಮುಂದೆ ಚೂರು ಚಾರು ಹೆಚ್ಚುಕಡಿಮೆ ಯಾಗುತ್ತ ನಡೆಯಿತು.

ಬ್ರಹ್ಮದೇಶದ ದಕ್ಷಿಣ ಭಾಗವನ್ನು ತೆಲಗು ನಿವಾಸಿಗಳು ಆಕ್ರಮಿಸಿದರು. ಅನೇಕರು ಬ್ರಹ್ಮದೇಶಕ್ಕೆ ತಮ್ಮ ಬುದ್ಧ ಮತೋಪದೇಶಕರನ್ನು ಕಳಿಸಿದ್ದರೆಂಬುವ ಬಗ್ಗೆ ಬೇಕಾದಷ್ಟು ಆಧಾರಗಳಿವೆ. ಪ್ರೋಮ ಹತ್ತರಿರುವ ಘೋರಾ ಕ್ಷೇತ್ರದ ಹತ್ತರ ಈಗಲೂ ಹಿಂದೂಗಳ ದೊಡ್ಡ ದೊಡ್ಡ ಒಕ್ಕಲುಗಳಿದ್ದವೆಂಬುದು ಕಾಣುತ್ತದೆ. ಬ್ರಹ್ಮೀ ಜನರು ತಮ್ಮ ಧರ್ಮ ಶಾಸ್ತ್ರಕ್ಕೆ ಈಗಲೂ ಧರ್ಮಸಾಧನೆಂದು ಅನ್ನುವದುಂಟು.

**ಮಿ, ವಿಲ್ಸನ್‌ರು:**—' ಬ್ರಹ್ಮೀ ಹಾಗೂ ತಿಬೇಟದವರ ಸಂಸ್ಕೃತಿಗಳಿಗೆ ಹಿಂದೂ ಸಂಸ್ಕೃತಿಯೇ ಮೂಲವು." ಬ್ರಹ್ಮ ಶಬ್ದವೇ ಸಂಸ್ಕೃವಿದ್ದು ಕಾಂಬೋಜ ಎಂಬುದು ಈಗಿನ ಕ್ಯಾಂಬೋಡಿಯಕ್ಕೆ ಪುರಾಣದೊಳಗಿನ ಹೆಸರು; ಕ್ಯಾಂಬೋಡಿಯದ ಒಕ್ಕಲಿಕೆಯ (colonization) ಬಗ್ಗೆ ಬರೆಯುವಾಗ ಮಿ. ಹ್ಯಾವೆಲ್ಲರು ಅನ್ನುವದು:—"ಕ್ರಿ. ಶ ೪ನೇ ಶತಮಾನದ ಸುಮಾರಕ್ಕೆ ತಕ್ಷಶಿಲಾ ನಗರದ ಸುತ್ತುಮುತ್ತಲಿನ ಕೆಲ ಸಾಹಸಿಗರು ಸೇರಿ ಗುಂಪಾಗಿ ಕ್ಯಾಂಬೋಡಿಯಕ್ಕೆ ಹೋಗಿ ಅಲ್ಲಿ ಒಕ್ಕಲಾದರೆಂದು ತಿಳಿಯುತ್ತದೆ; ಅವರೇ ಮುಂದೆ ಅಲ್ಲಿಯೊಂದು ಬೇರೆ ಸಾಮ್ರಾಜ್ಯವನ್ನೇ ಕಟ್ಟಿದರು."

**ಸಯಾಮಃ—** ಸಯಾಮದವರ ಪರಂಪರೆಯನ್ನು ಹುಡುಕಿದರೆ, ಬುದ್ಧನ ಪೂರ್ವದಲ್ಲಿಯೇ ಹಿಂದೂಜನರು ಸಯಾಮಕ್ಕೆ ಹೋಗಿ ವಾಸವಾದರೆಂದು ತಿಳಿಯುತ್ತದೆ. ಹಿಂದೂಜನರು ಬೇರೆ ದೇಶಗಳಲ್ಲಿ ತಮ್ಮ ಪ್ರಭುತ್ವವನ್ನು ಹೇಗೆ ಸ್ಥಾಪಿಸಿದರೆಂಬುದರ ವಿಷಯವಾಗಿ ಚೀನರ ಇತಿಹಾಸದೊಳಗೆ ಸಿಗುತ್ತದೆ; ಅದು ಏನಂದರೆ "ಪೂರ್ವಹಿಂದುಸ್ಥಾನದಿಂದ ಕೌಂಡಿಣ್ಯ ಎಂಬೊಬ್ಬ ಬ್ರಾಹ್ಮಣನಿಗೆ "ನೀನು ಕಾಂಭೋಜದ ಅರಸನಾಗು ಎಂದು" ಸ್ವಪ್ನವಾಯಿತು; ಆದರಂತೆ ಅವನು ಹೊರಡಲು ಅಲ್ಲಿಯ ಜನರು ಅವನಿಗೆ ಇದಿರ್ಗೊಂಡು ಅರಸನನ್ನಾಗಿ ಮಾಡಿದರು. ಇದು ಕ್ರಿ. ಶ. ೪೨೦—೪೫೦ ಸಂಭವಿಸಿತು; ಬುದ್ಧ ಎಂಬ ಅರಸನು ಕ್ರಿ. ಶ. ೫೦೨—೫೦೭ ರ ವರೆಗೆ ಮಲಾಯಾ ದ್ವೀಪದಲ್ಲಿಯ ಉತ್ತರ ಭಾಗದಲ್ಲಾಳುತ್ತಿದ್ದಾಗ, ಅವನ ಓಲಗದಲ್ಲಿ ಅನೇಕ ಬ್ರಾಹ್ಮಣರಿದ್ದರೆಂದೂ ಅವರೆಲ್ಲರೂ ಆ ರಾಜನಿಂದ ದಾನದಕ್ಷಿಣಾದಿಗಳನ್ನು ಪಡೆಯಲು ಹಿಂದುಸ್ಥಾನದಿಂದ ಬಂದಿದ್ದರೆಂದೂ ಒಂದೆಡೆಯಲ್ಲಿ ಉಲ್ಲೇಖವಿದೆ. ಇದರ ಮೇಲಿಂದ ಹಿಂದೂ ಜನರು ಕ್ಯಾಂಬೋಡಿಯಾ ದ್ವೀಪದೊಳಗೆ ಕೂಡ ತಮ್ಮ ಸಂಸ್ಕೃತಿಯನ್ನು ಹೇಗೆ ಆಳವಾಗಿ ಊರಿದ್ದರೆಂಬುದು ವ್ಯಕ್ತವಾಗುತ್ತದೆ. ಸಯಾಮದಲ್ಲಿ ಒಕ್ಕಲಾಗಿದ್ದ ಹಿಂದೂಗಳೇ ಈಗಲೂ ಅಲ್ಲಿ ನಿಂತಿರುವ ಮಹಾಮಹಾ ದೇವಸ್ಥಾನಗಳನ್ನು ಕಟ್ಟಿದರು. ಈ ದೇವಸ್ಥಾನಗಳು ಅತ್ಯದ್ಭುತವಿದ್ದು ಕೆಲಕೆಲವು ಅಂಶಗಳಲ್ಲಿ ಇಜಿಪ್ತದ ಪಿರ್‍ಯಾಮಿಡ್ಡಗಳನ್ನು ಕೂಡ ಹಿಮ್ಮೆಟ್ಟಿಸುವವು; ಈ ದೇವಸ್ಥಾನದ ಹೊರಗೋಡೆಗಳು ರಾಮಾಯಣದೊಳಗಿನ ಬೇರೆ ಬೇರೆ ದೃಶ್ಯಗಳಿಂದ ಅಲಂಕರಿಸಲ್ಪಟ್ಟಿವೆ.

ಹಿಂದುಸ್ಥಾನದಿಂದ ಒಕ್ಕಲ–ಗುಂಪುಗಳು ಆಗಾಗ್ಗೆ ಹಿಂಡುಗಟ್ಟಿಕೊಂಡು ದೇಶದೇಶಾಂತರಗಳಲ್ಲೆಲ್ಲ ಸಂಚರಿಸುತ್ತಿದ್ದುದರಿಂದ ಎಲ್ಲಿನೋಡಿದಲ್ಲಿ ಅವರ ಸುಳಿದಾಟವೇ ಕಾಣುತ್ತಿತ್ತು; ಆರ್ಯಸಂಸ್ಕೃತಿಯ ಧ್ವಜವೇ ಫಡಫಡಿಸುತ್ತಿತ್ತು; ಹಿಂದೂ ಅರ್ಚಿಪೇಲಾಗೋ ನಡುಗಡ್ಡೆಯಲ್ಲಿ ಸೂರ್ಯವಂಶದ ಕ್ಷತ್ರಿಯರು ಒಕ್ಕಲಾಗಿದ್ದುದರಿಂದ ಅಲ್ಲಿ ಈಗಲೂ ಹಿಂದೂಮತದ ಗುಡಿಗೋಪುರಗಳು ಕಂಗೊಳಿಸುತ್ತಿವೆ.

**ಮಿ. ಎಲ್‌ಫಿನ್‌ಸ್ಟನ್ನ ಸಾಹೇಬರನ್ನುವನು:—** " ಕಲಿಂಗ

ದೇಶದಿಂದ ಎಷ್ಟೋ ಮನೆತನಗಳು ಜಾವಾದ್ವೀಪಕ್ಕೆ ಬಂದು ಒಕ್ಕಲಾದವೆಂದೂ ಅಲ್ಲಿಯ ಮೂಲನಿವಾಸಿಗಳನ್ನು ಸುಧಾರಿಸಿದರೆಂದೂ ಅಲ್ಲಿ ಹೊಸದಾದ ಶಕವನ್ನೇ ಪ್ರಾರಂಭಿಸಿದರೆಂದೂ ತಿಳಿಯುತ್ತದೆ. ಬಲಿ—ಜಾವಾದ್ವೀಪಕ್ಕೆ ಎಲ್ಲಕ್ಕೂ ಮೊದಲು ಹೋಗಿ ಒಕ್ಕಲಾದವರೆಂದರೆ ಬ್ರಾಹ್ಮಣರೇ! ಅವರ ತರುವಾಯ ಬೌದ್ಧರು ಹೋದರು; ೭.ನೇ ಶತಮಾನದ ಪ್ರಾರಂಭಕ್ಕೆ ಗುಜರಾತದ ಒಬ್ಬ ಬುದ್ಧಮತಾನುಯಾಯಿಯಾದ ಅರಸನು ೫೦೦೦ ಜನರೊಂದಿಗೆ ಜಾವಾದೊಳಗಿನ ಮಾತರಂ ಎಂಬಲ್ಲಿ ಬಂದು ಒಕ್ಕಲಾದನು; ಈತನ ಅನುಯಾಯಿಗಳಾದರೂ ಬೌದ್ಧರೇ ಇದ್ದರು; ಈಗಿನ ಕಾಲದಿಂದಲೇ ಬುದ್ಧಮತವು ಜಾವಾಗವರ ಧರ್ಮವಾಯಿತು; ಇಲ್ಲದಿದ್ದರೆ ಅದಕ್ಕೂ ಮುಂಚಿತವಾಗಿ ಮುಖ್ಯವಾಗಿ ಜಾವಾ-ಬಲಿ—ನಡುಗಡ್ಡೆಯವರು ಶೈವರಿದ್ದರು; ೪ ನೇ ಶತಮಾನದ ವರೆಗೆ ಇಲ್ಲಿಯ ನಿವಾಸಿಗಳು ಸಂಪೂರ್ಣ ಹಿಂದೂಮತಾವಲಂಬಿಗಳು ಇದ್ದರು; ಇದರಿಂದ ಜಾವಾ ದ್ವೀಪವು ಅನೇಕ ಶತಮಾನಗಳವರೆಗೆ ಹಿಂದೂಧರ್ಮ ಹಾಗೂ ರಾಜರ ಮುಖ್ಯ ದೇಶವಾಗಿತ್ತು; ದಕ್ಷಿಣ ದೇಶದ ವೀರಬ್ರಾಹ್ಮಣರು ಬ್ರಾಹ್ಮಣಧರ್ಮಪ್ರಸಾರಾರ್ಥವಾಗಿ ನಡೆಯಿಸಿದ ಅನೇಕ ಸಾಹಸಗಳಲ್ಲಿ ಇದೊಂದು ಮೇಲಾದ ಉದಾಹರಣೆಯು; ಕ್ರಿ. ಶ. ೧೫೭೪ ಇಸ್ವಿಯ ವರ್ಷ ಜಾವಾದ ಅರಸನಾದ ಶ್ರೀರಾಮನು ಮೊಗಲರಾಜರೊಡನೆ ಒಪ್ಪಂದ ಮಾಡಿಕೊಂಡನೆಂದು ಮಿ. ಇಲಿಯಟ್ ಸಾಹೇಬರು ತಮ್ಮ ಹಿಂದುಸ್ಥಾನದ ಇತಿಹಾಸದಲ್ಲಿ ಬರೆದಿರುವರು; ಅದರಂತೆ ಬೋರ್ನಿಯೋ ದ್ವೀಪದಲ್ಲಿಯೂ ಹಿಂದೂ ದೇವಾಲಯಗಳೂ ಬಾಲೀ ದ್ವೀಪದಲ್ಲಿ ಬ್ರಾಹ್ಮಣಧರ್ಮವಲ್ಲದೆ, ಹಿಂದೂಗಳ ನಗರ ವ್ಯವಸ್ಥೆಯ ಪದ್ಧತಿಯೂ ರೂಢಿಯಲ್ಲಿದೆಯೆಂದು ಸರ ಸ್ಟಾಂಫರ್ಡ ರ್‍ಯಾಫಲ್ಸ ಎಂಬ ಸಾಹೇಬರು ಬರೆದಿಟ್ಟಿದ್ದಾರೆ; ಸುಮಾತ್ರಾ ದ್ವೀಪದಲ್ಲಿ ಮುಖ್ಯವಾಗಿ ಜಾವಾ, ಕ್ಯಾಂಬೋಡಿಯಾ (ಕಾಂಬೋಜ) ದಲ್ಲಿಯಂತೆ ಬಂಗಾಲ, ಓಡಿಸಾ, ಮಚ್ಛಲಿಪಟ್ಟಣಗಳಿಂದ ಬಂದ ಹಿಂದೂಜನರೇ ಕ್ರಿ. ಶ.ದ ಪ್ರಾರಂಭಕ್ಕೆ ಮೊದಲು ಒಕ್ಕಲಾಗಿದ್ದರು; ಅಲ್ಲಿ ಕ್ರಿ. ಶ. ೧೫೫೦ ಇಸ್ವಿಯಲ್ಲಿ ಪರಮೇಶ್ವರನೆಂಬೊಬ್ಬ ರಾಜನು ಆಳುತ್ತಿದ್ದನೆಂದು ಅಲ್ಬುಕರ್ಕನು ಬರೆದಿರುವನು.

**ಚೀನ–ಜಪಾನ:—** ಚೀನವೂ ಒಂದಾನೊಂದು ಕಾಲಕ್ಕೆ ಬಹು ಮಟ್ಟಿಗೆ ಹಿಂದೂ ಜನರಿಂದಲೇ ಒಕ್ಕಲಾಗಿದ್ದಿತೆಂದು ತಿಳಿಯುತ್ತದೆ. ಚೀನಕ್ಕೆ ಎಲ್ಲಕ್ಕೂ ಮೊದಲು ಕಾಲಿಟ್ಟವರೆಂದರೆ ಹಿಂದೂ ಕ್ಷತ್ರಿಯರೇ; ಈ ಬಗ್ಗೆ ಕರ್ನಲ್ ಟಾಡರನ್ನುವದು:– ಚೀನ ಹಾಗೂ ತಾರ್ತರಿಯ ವಂಶ ಪರಂಪರೆಯನ್ನು ತೆರೆದು ನೋಡಿದರೆ, ಅವರು ಪುರಾಣಕಾಲೀನ ಅರಸನಾದ ಪುರೂರವನ ( ಚೀನರು ಹೇಳುವ ಹೆಸರು–ಅವರ ) ವಂಶಜರೆಂದು ಹೇಳುವರು; ಇದೇ ವಿಷಯವಾಗಿ ಸರ ಡಬ್ಲ್ಯು ಜೋನ್ಸರನ್ನುವದು:– ಚೀನರು ತಮ್ಮ ಪೂರ್ವಿಕರು ಹಿಂದೂಗಳೆಂದೇ, ಸ್ಪಷ್ಟವಾಗಿ ನಾಕ್ಷಿ ನುಡಿಯುತ್ತಾರೆ. ಚೀನರ ಪ್ರಾಚೀನರ ಪಟ್ಟಿಯಿಂದ ತಿಳಿಯುವದೇನಂದರೆ, ಕ್ರಿ. ಶ. ಮುಂಚೆ ೨೯೦೦ ನೇ ವರ್ಷ ಚೀನರು ಪಶ್ಚಿಮಕ್ಕಿರುವ ದೊಡ್ಡಗುಡ್ಡಗಾಡು ದೇಶವನ್ನುದಾಟಿ ಚೀನಕ್ಕೆ ಬಂದರು; ಇದರ ಮೇಲಿಂದ ಚೀನರ ಮೂಲ ನಿವಾಸಿಗಳು ಕಾಶ್ಮೀರ ಅಥವಾ ಪಂಜಾಬದವರೆಂದು ವ್ಯಕ್ತವಾಗುತ್ತದೆ.”

**ಮಿ. ಲ್ಯಾಕೋಪೆರಿ**ಯುವರು ಚೀನರ ಸಂಸ್ಕೃತಿಯಬಗ್ಗೆ ಒಂದು ಪುಸ್ತಕ ಬರೆದಿದ್ದು ಅದರಲ್ಲಿ ಅನ್ನುವದು:– ಕ್ರಿ. ಶ. ಪೂರ್ವ ೬೮೦ ವರ್ಷದಿಂದ ಹಿಂದುಸ್ಥಾನದೊಡನೆ ಚೀನದವರ ಸಮುದ್ರವ್ಯಾಪಾರವಿತ್ತೆಂದು ಕಾಣುತ್ತದೆ;” ಮೇಲಾಗಿ ಚೀನ ಹಾಗೂ ಚೀನರ ನಾಮವಾಸುಗಳ ಉಲ್ಲೇಖವು ಪ್ರಾಚೀನ ಸಂಸ್ಕೃತ ವಾಙ್ಮಯದೊಳಗೆ ಬೇಕಾದಷ್ಟು ಸಿಗುತ್ತದೆ. ಹಿಂದೂದೇಶದ ರಾಯಭಾರಿಗಳು ಚೀನ ರಾಜರ ಓಲಗಕ್ಕೆ ಹೋದ ಉದಾಹರಣೆಗಳಿವೆ.

**ಪ್ರೊ. ಹೀರನರು:—** “ಚೀನಕ್ಕೂ ಚೀನ ಎಂಬ ಹೆಸರನ್ನು ಕೊಟ್ಟವರು ಹಿಂದುಗಳೇ”. ಕ್ರಿ.ಶ. ೨ನೇ ಶತಕದಲ್ಲಿ ಹಿಂದೂಗಳು ಸಿಂಧದ ಕ್ಷತ್ರಪನಾದ ಕಾಠೇವಾಡದ ರುದ್ರದಮನನ ಆಳಿಕೆಯಲ್ಲಿ ಚೀನಕ್ಕೆ ಸಮುದ್ರ ಮಾರ್ಗವಾಗಿ ಕೆಲವು ಕಾಣಿಕೆಗಳನ್ನೊಯ್ದು ಉಲ್ಲೇಖವು ಮಿಲಿಂದ ಪ್ರಶ್ನದಲ್ಲಿ ಅದೆ. ಬುದ್ಧಭದ್ರನೆಂಬುವ ಶಾಕ್ಯ ರಾಜಪುತ್ರನು ಕ್ರಿ ಶ. ೪೯೮ರಲ್ಲಿ ಉತ್ತರಹಿಂದುಸ್ಥಾನದಿಂದ ಚೀನಕ್ಕೆ ಬಂದನು. ೪೨೪ರಲ್ಲಿ ಕಾಬೂಲಿನ ಪದಚ್ಯುತ ಅರಸನ ಮೊಮ್ಮಗನಾದ ಗುಣವರ್ಮನು ಸಿಲೋನ ಜಾವಾ ಮುಂತಾದವುಗಳನ್ನು ನೋಡಿಕೊಂಡು ಸಂಗ ಮನೆತನದ ರಾಜಧಾನಿಗೆ

ತಲ್ಪಿದನು. ಸಿಂಹಲದ್ವೀಪದಿಂದ ಬುದ್ಧಭಿಕ್ಷುಣಿಯರ ಗುಂಪುಗಳು ಎಷ್ಟೋ ಸಲ ಚೀನಕ್ಕೆ ಹೋದ ಉಲ್ಲೇಖಗಳಿವೆ; ಕ್ರಿ. ಶ. ೫೨೬ ರಲ್ಲಿ ದಕ್ಷಿಣ ಹಿಂದುಸ್ಥಾನದ ಅರಸನಾದ ಬೋಧಿಧರ್ಮನು ಸಮುದ್ರಮಾರ್ಗವಾಗಿ ಕ್ಯಾಂಟನ್ನಕ್ಕೆ ಬಂದನು; ಆಗ ಅವನನ್ನು ದಕ್ಷಿಣ ಚೀನದ ರಾಜಧಾನಿಯಾಗಿದ್ದ ನಾನಕಿಂಗದ ಅರಸನು ಕರೆಯಿಸಿಕೊಂಡನು; ಈ ಮೇರೆಗೆ ಚೀನ ಹಿಂದು ಸ್ಥಾನಗಳಲ್ಲಿ ಸಹವಾಸವು ಅಖಂಡವಾಗಿ ನಡೆಯುತ್ತಿತ್ತೆಂದು ಅನೇಕ ಗ್ರಂಥಾಂತರಗಳಿಂದ ತಿಳಿಯುತ್ತದೆ. ಈ ಕಡಲಪಯಣವು ತಾಮ್ರಲಿಪ್ತಿ ಎಂಬ ಬಂದರದ ಮುಖಾಂತರವಾಗಿ ಸಾಗುತ್ತಿದ್ದುದರಿಂದ ಹಿಂದೂರಾಜರು ಅದನ್ನು ಬೇಕೆಂದು ಕಾದಿಟ್ಟಿದ್ದರೆಂದೂ ಕ್ರಿ. ಶ. ೬೪೫ ರಲ್ಲಿ ಚೀನದ ಪ್ರವಾಸಿಯಾದ ಹ್ಯುಯೇನತ್ಸಂಗನು ಹಿಂದುಸ್ಥಾನದೊಳಗಿನ ಪ್ರವಾಸತೀರಿಸಿಕೊಂಡು ಮರಳಿ ತನ್ನ ದೇಶಕ್ಕೆ ಹೋಗಬೇಕೆಂದಾಗ ಆಸಾಮದ (ಕಾಮರೂಪ) ದ ಅರಸನಾದ ಭಾಸ್ಕರವರ್ಮನೆಂಬ ಬ್ರಾಹ್ಮಣ ರಾಜನು, ( ಹರ್ಷ ಮಹಾರಾಯನ ಮಾಂಡಲೀಕನು ) ಹ್ಯುಯೇನತ್ಸಂಗನಿಗೆ " ನೀವು ದಕ್ಷಿಣಮಾರ್ಗದಿಂದ ಹೋಗಲೆಳಸಿದರೆ, ನಿಮ್ಮ ಜೊತೆಗೆಂದು ನಾನು ನಿಮ್ಮೊಡನೆ ನನ್ನ ಕೈಕೆಳ ಗಿನ ಜನರನ್ನು ಕಳಿಸುವೆನೆಂದು ಹೇಳಿದನೆಂದೂ ತಿಳಿಯುತ್ತದೆ.

ಹಿಂದುಸ್ಥಾನದ ಸಾಂಸ್ಕೃತಿಕ ವರ್ಚಸ್ಸವು ಆಗ ಪ್ರತಿಯೊಂದು ದೇಶ ದಲ್ಲಿ ಕಂಡುಬರುತ್ತಿತ್ತು. ಚೀನದ ವರೆಗೆ ಹಬ್ಬಿದ ಆರ್ಯಸಂಸ್ಕೃತಿಯು ಕಿರಣಗಳು ಜಪಾನದ ಮೇಲೆ ಹರಡದೇ ಇರುವದು ಸಂಭವವೇ! ಜಪಾನ ದವರ ವಾಙ್ಮಯದಲ್ಲಿ ಈ ಹೊತ್ತಿಗೂ ಸಂಸ್ಕೃತ ಅಲಂಕಾರ ಶಾಸ್ತ್ರವನ್ನು ಅನುಸರಿಸಿದ ಒಂದು ಗ್ರಂಥವಿದೆ. ಬೋಧಿಸೇನ ಭಾರದ್ವಾಜನೆಂಬುವ ಒಬ್ಬ ಬ್ರಾಹ್ಮಣನು ಹಿಂದುಸ್ಥಾನದಿಂದ ಚೀನ ಮಾರ್ಗವಾಗಿ ಜಪಾನಕ್ಕೆ ಹೋಗಿ ಅಲ್ಲಿ ಜಪಾನಿಯರಿಗೆ ಸಂಸ್ಕೃತ ಕಲಿಸಿದನೆಂದು ರಾಯಲ್ ಏಸಿಯಾಟಿಕ್ ಸಂಘದ ಮಾಸಪತ್ರಿಕೆಯಲ್ಲಿ ಒಂದು ಲೇಖವು ಬಂದಿದೆ. ಕ್ರಿ. ಶ. ೭೫೦ರಲ್ಲಿ ಚೀನದಲ್ಲಿಯ ಕ್ಯಾಂಟನ್ನ ನದಿಯಲ್ಲಿ ಅನೇಕ ಬ್ರಾಹ್ಮಣರ ಹಡಗಗಳು ಇದ್ದವೆಂದು ಫಾಹಿಯಾನನು ಬರೆದಿದ್ದಾನೆ. ಜಪಾನರ ಮೂಲಾಕ್ಷರುಗಳು ಕೂಡ ಇದೇ ಸಮಯಕ್ಕೆ ಸಂಸ್ಕೃತ ಮೂಲಾಕ್ಷರಗಳನ್ನು ನೋಡಿಕೊಂಡೇ ರಚಿಸಲ್ಪಟ್ಟವೆಂದೂ ಕಂಡುಬರುತ್ತದೆ; ಬುದ್ಧಮತಪ್ರಚಾರಕ್ಕಾಗಿಯೂ

ಅನೇಕರು ಜಪಾನಕ್ಕೆ ಹೋಗಿದ್ದರೆಂಬುವ ಉಲ್ಲೇಖವಿದೆ: ಜಪಾನಿಯರ ಪವಿತ್ರ ದೇವಾಲಯದಲ್ಲಿ ಈಗಲೂ ಕಾದಿಟ್ಟ ಪ್ರಾಚೀನ ಕೆಲ ಮಂತ್ರ-ಶಾಸ್ತ್ರಗಳು ೧೧ನೇ ಶತಮಾನದ ಬಂಗಾಲೀ ಬರಹದಿಂದ ಬರೆಯಲ್ಪಟ್ಟಿವೆಯೆಂದು ತಿಳಿಯುತ್ತದೆ; ಇದು ಸಾಂಸ್ಕೃತಿಕ ಹಾಗೂ ಬೌದ್ಧಿಕ ಪ್ರಚಾರವಾಯಿತು; ಜಪಾನಕ್ಕೆ ಎಲ್ಲಕ್ಕೂ ಮೊದಲು ಹತ್ತಿಯ ಗುರುತು ಮಾಡಿಕೊಟ್ಟವರು ಹಿಂದುಗಳೇ! ಇದು ಸುಮಾರು ೯ ನೇ ಶತಮಾನದ ಪ್ರಾರಂಭಕ್ಕೆ!

**ಅಮೇರಿಕಾ**—ಯುರೋಪದ ಸಂಸ್ಕೃತಿಯು ಅಮೇರಿಕದಲ್ಲಿ ಹರಡುವ ಹಲವು ಶತಮಾನಗಳ ಪೂರ್ವದಲ್ಲಿಯೇ ಆ ದೇಶದಲ್ಲಿ ಅತ್ಯಂತ ಪ್ರಾಚೀನ ಸಂಸ್ಕೃತಿಯು ಹರಡಿ ಬೇರು ಬಿಟ್ಟಿತ್ತೆಂಬುದು ಅಲ್ಲಿ ಎದ್ದು ಕಾಣಿಸುವ ಅನೇಕ ಅವಶೇಷಗಳಿಂದ ಗೊತ್ತಾಗುತ್ತದೆ. ದಕ್ಷಿಣ ಅಮೇರಿಕದಲ್ಲಿಯಂತೂ ಈಗಲೂ ಹಳೆಯ ಕಾಲದ ಪಟ್ಟಣ, ದುರ್ಗ, ದೊಡ್ಡ ದೊಡ್ಡ ಕಟ್ಟಡ, ಕೆರೆ, ಬಾವಿ, ದಾರಿ, ಕಾಲುವೆ ಮುಂತಾದವುಗಳ ಗುರುತುಗಳು ಹೆಜ್ಜೆಜ್ಜೆಗೆ ಕಂಡುಬರುತ್ತವೆ. ಇವೆಲ್ಲವನ್ನು ನೋಡಿದರೆ ದಕ್ಷಿಣಅಮೇರಿಕವು ಒಂದಾನೊಂದು ಕಾಲಕ್ಕೆ ಅತ್ಯಂತ ಘನತೆಗೇರಿದ ಜನರಿಂದ ವಾಸಿಸಲ್ಪಟ್ಟ ದೇಶವಾಗಿತ್ತೆಂಬುದು ಸ್ಪಷ್ಟವಾಗುವದು; ಆದರೆ ಇಷ್ಟು ಶ್ರೇಷ್ಠ ಮಾದರಿಯ ಸಂಸ್ಕೃತಿಯು ದಕ್ಷಿಣಅಮೇರಿಕಕ್ಕೆ ಎಲ್ಲಿಂದ ಬಂದಿತೆಂಬುದು ಗುಟ್ಟಿನ ಮಾತಾಗಿದೆ; ಆದರೂ ಈ ಗುಟ್ಟನ್ನು ಕುರಿತು ಯುರೋಪಿಯ ಸಂಶೋಧಕರು ಕೆಳಗಿನಂತೆ ಅಭಿಪ್ರಾಯ ಪಡುವರು.

**ಮಿ. ಕೋಲ್ಮನ್ನರನ್ನುವದು:**— "ಬ್ಯಾರನ್ನ ಹಂಬೋಲ್ಟರೆಂಬ ಜರ್ಮನಿಯ ಪ್ರವಾಸಿಕರು ಹಾಗೂ ಶಾಸ್ತ್ರಜ್ಞರು ಅಮೇರಿಕದಲ್ಲಿ ಈಗಲೂ ಹಿಂದೂ ಜನವಸತಿಯ ಕುರುಹುಗಳು ಸಿಗುತ್ತವೆಂದು ಬರೆದಿದ್ದಾರೆ."

ಪಾಕಾಕ್ ಎಂಬವರು ದಕ್ಷಿಣ ಅಮೇರಿಕದಲ್ಲಿಯ ಪೇರು ದೇಶದ ನಿವಾಸಿಗಳ ಸಾಮಾಜಿಕ ಸಂಪ್ರದಾಯಗಳನ್ನು ವರ್ಣಿಸುವಾಗ ಅನ್ನುವದು:— ಪೇರುದವರೂ ಅವರ ಪೂರ್ವಜರೂ ಹಿಂದೂಗಳೂ ಇವರೆಲ್ಲರೂ ರೀತಿ ನಡತೆಗಳ ವಿಷಯದಲ್ಲಿ ಒಂದೇ ವಿಧವಾಗಿರುವರು; ಪ್ರಾಚೀನ ಅಮೇರಿಕದವರ ಕಟ್ಟಡದ ಕಲೆಯು ಹಿಂದೂ ಶಿಲ್ಪವನ್ನೇ ಹೋಲುತ್ತದೆ;

ಮಿ. ಹಾರ್ಡಿಯುವರು ಅನ್ನುವದು:—ಮಧ್ಯ ಅಮೇರಿಕದಲ್ಲಿಯ ಕಟ್ಟಡಗಳು ಹಿಂದುಸ್ಥಾನದೊಳಗಿನ ಗೋಪುರಗಳಂತಿವೆ."

ಅದರಂತೆ ಪ್ರಾಚೀನ ಅಮೇರಿಕದ ಪುರಾಣವಾದರೂ ಹಿಂದೂದೇಶದ ಪುರಾಣದ ಮರಿಯಾಗಿತ್ತೆಂಬುದಕ್ಕೆ ಅನೇಕ ಆಧಾರಗಳುಂಟು; ಅವುಗಳ ವಿವರ:— ಹಿಂದೂಗಳಂತೆ ಅಮೇರಿಕೆಯುವರು ಭೂಮಿತಾಯಿಯನ್ನು (ಧರಿತ್ರಿಮಾತಾ, ಪೃಥ್ವೀಮಾತಾ) ಪೂಜಿಸುತ್ತಿದ್ದರು; ಹಿಂದುಸ್ಥಾನದೊಳಗಿನ ಜನರು ತಮ್ಮ ದೇವರ ಹಾಗೂ ವೀರರ ಪಾದಗಳನ್ನು ಈಗಲೂ ಪೂಜಿಸುತ್ತಿರುವಂತೆ ಅಮೇರಿಕದವರು ಪೂಜಿಸುತ್ತಿದ್ದರು. ಸೂರ್ಯ ಹಾಗೂ ಚಂದ್ರಗ್ರಹಣಗಳನ್ನು ಹಿಂದೂಜನರಂತೆಯೇ ಅಮೇರಿಕದವರು ಪಾಲಿಸುತ್ತಿದ್ದರು; ಮತ್ತು "ಬೆಳಕಿನ ಶತ್ರುವಾದ ಮಲೇಯುವೋ ಎಂಬ ರಾಕ್ಷಸನು ಸೂರ್ಯ-ಚಂದ್ರರನ್ನು ನುಂಗುವನೆಂದೂ ಅವರ ಭಾವನೆಯಿತ್ತು;" ಇದು ಹಿಂದೂಜನರ ರಾಹು-ಕೇತುಗಳಂತಿರುವದು; ಮೇಕ್ಸಿಕೋದವರು ಗಣಪತಿಯಂಥ ಒಂದು ದೇವರನ್ನು ಪೂಜಿಸುತ್ತಿದ್ದರು; ಅಮೇರಿಕದವರ ಪ್ರಳಯದ ಕಲ್ಪನೆಯು ಹಿಂದೂಜನರಂತೆಯೇ ಇದ್ದಿತು.

ಉತ್ತರ ಅಮೇರಿಕದಲ್ಲಿಯೂ ಈಗಲೂ ಸರ್ಪಪೂಜೆಯು ರೂಢಿಯಲ್ಲಿದೆ; ಹಿಂದೂಪುರಾಣಗಳು ಇಜಿಪ್ತ, ಗ್ರೀಸ, ಚೀನ, ಸ್ಕ್ಯಾಂಡಿನೇವಿಯಾ ಹಾಗೂ ಅಮೇರಿಕಾ ಮುಂತಾದ ದೇಶಗಳಲ್ಲಿಯ ಪುರಾತನ ಕಥೆಗಳಲ್ಲಿಯೂ ಕಂಡು ಬರುತ್ತವಾದ್ದರಿಂದ ಹಿಂದೂ ಸಂಸ್ಕೃತಿಯ ಛಾಯೆಯು ಮಿಕ್ಕವರಲ್ಲಿ ಬಿದ್ದಿರಲಿಕ್ಕೆ ಬೇಕೆಂಬುದಕ್ಕೆ ಇದೊಂದು ಬಲವಾದ ಸಾಕ್ಷಿ; ಪುನರ್ಜನ್ಮದ ತತ್ವವಾದರೂ ಎಲ್ಲರೂ ಹಿಂದೂಗಳಿಂದಲೇ ಎತ್ತಿರುವರು; ಅಮೇರಿಕದ ಹೆಂಗಸರ ಉಡುಪು ಕೂಡ ಹಿಂದೂಹೆಂಗಸರಂತೆಯೇ ಇತ್ತು; ಆದರೆ ಅಮೇರಿಕಕ್ಕೆ ಹಿಂದೂಜನರು ಹೋಗಿ ಒಕ್ಕಲಾದದ್ದು ರಾಮಾಯಣಕಾಲದ ತರುವಾಯ; ಮುಂದೆ ಮಹಾಭಾರತಕಾಲದನಂತರವೂ ಅನೇಕಸಲ ಹಿಂದೂಜನರು ಅಮೇರಿಕಕ್ಕೆ ಹೋಗಿಬರುತ್ತಿದ್ದರೆಂಬುದಕ್ಕೆ ಐತಿಹಾಸಿಕ ಆಧಾರಗಳೂ ಇವೆ; ದಕ್ಷಿಣ ಅಮೇರಿಕದವರು ತಮ್ಮದೊಂದು ಉತ್ಸವ (ದಸರೆಯಂಥ) ನಡಿಸುತ್ತಿದ್ದು, ರಾಮ-ಸೀತಾ ಎಂಬುದರ ಬದಲಾಗಿ ಅವರು ರಾಮ-ಸಿತ್ವ ಎಂಬುವದುಂಟು; ಇದು ಹಿಂದೂಜನರ ರಾಮಾ

ಯಣದ ಅನುಕರಣವಲ್ಲದೇ ಮತ್ತೇನೂ ಅಲ್ಲವೆಂದು ಸರ ಡಬ್ಲ್ಯು ಜೋನ್ಸರು ಬರೆಯುವರು. ಬಹ್ವಾರೆ, ಅಮೇರಿಕದವರ ಪುರಾಣ, ಶಿಲ್ಪಕಲೆ, ತತ್ವಜ್ಞಾನ ಸಂಪ್ರದಾಯ, ನಡೆನುಡಿ ಮುಂತಾದವುಗಳು ಹಿಂದೂಜನರಂತೆಯೇ ಇರುವವು; ಮಹಾಭಾರತದಲ್ಲಿ ಅರ್ಜುನನು ಪಾತಾಲದೇಶಕ್ಕೆ ಹೋಗಿ (ಅಮೇರಿಕೆಗೆ) ಉಲೂಪಿಯನ್ನು ಲಗ್ನವಾದ ವರ್ಣನೆಯಿದೆ.

ಹಿಂದೂಜನರು ಅಮೇರಿಕೆಗೆ ಹೋಗಬೇಕಾಗರೆ ಸಿಲೋನ, ಜಾವಾ, ಬಲಿ, ಬೋರ್ನಿಯೋ, ನಡುಗಡ್ಡೆಗಳ ಮೇಲಿಂದ ಹಾಯ್ದು ಅಮೇರಿಕೆಗೆ ಹೋಗುತ್ತಿದ್ದರು; ಎಷ್ಟೋ ಸಾರೆ ಚೀನ, ಸೈಬೇರಿಯಾ, ಬೆಹರಿಂಗ ಸಾಮುದ್ರಧುನಿಯೊಳಗಿಂದ ಹಾಯ್ದು ಅಮೇರಿಕೆಗೆ ಹೋಗುತ್ತಿದ್ದರೆಂಬುದರ ಮೇಲಿಂದ ಅವರೆಷ್ಟು ಸಾಹಸಿಗರಿದ್ದರೆಂಬುದು ಕಂಡುಬರುತ್ತದೆ. ಹಿಂದೂಜನರಿಗೆ ಸಮುದ್ರಯಾನಕ್ಕೆ ಧರ್ಮದಿಂದ ಪ್ರತಿಬಂಧವಿದ್ದುದರಿಂದ ಅವರು ಹಿಮಾಲಯ ದಾಟಿ ಎಲ್ಲಿಯೂ ಹೊರದೇಶಕ್ಕೆ ಹೋಗಲಿಲ್ಲೆಂಬುದು ಇತಿಹಾಸದ ಸಂಪೂರ್ಣ ಅಜ್ಞಾನವನ್ನೇ ತೋರ್ಪಡಿಸುತ್ತದೆ; ಯಜುರ್ವೇದದಂಥ ಪುರಾತನ ಗ್ರಂಥದಲ್ಲಿ ಕೂಡ ಮನುಷ್ಯರೆಲ್ಲರೂ ಪರದೇಶಗಳಿಗೆ ಸಮುದ್ರ ಮಾರ್ಗ, ವಾಯುಮಾರ್ಗ, ಸೂರ್ಯಮಾರ್ಗಗಳಿಂದಲೂ ಪಯಣ ಬೆಳಿಸಲಿಕ್ಕೆಬೇಕೆಂದು ಹೇಳಿಯಿದೆ. (ಅಧ್ಯಾ. ೬ ಮಂತ್ರ ೨೧) ಹಿಂದುಸ್ಥಾನದಿಂದ ಯುರೋಪಕ್ಕಾಗಲಿ, ಅಮೇರಿಕೆಗಾಗಲಿ, ರಾಜಕೀಯ ಧಾರ್ಮಿಕ ಪ್ರಚಾರಕಾರ್ಯಕ್ಕಾಗಿ ಅನೇಕರು ಹೋದ ಉದಾಹರಣೆಗಳಿವೆ; ಮಹರ್ಷಿ ವ್ಯಾಸರು ತಮ್ಮ ಮಗ ಶುಕಮುನಿಯೊಡನೆ ಅಮೇರಿಕೆಗೆ ಹೋಗಿ ಅಲ್ಲಿ ಅನೇಕ ದಿನ ವಾಸಮಾಡಿದರೆಂದೂ, ಮುಂದೆ ಶುಕಮುನಿಗಳು ಯುರೋಪ (ಹೀರೋದೇಶ) ಮಾರ್ಗವಾಗಿ ಇರಾಣ, ತುರ್ಕಸ್ಥಾನಗಳ ಮೇಲಿಂದ ಹಾಯ್ದು ತಿರುಗಿ ಬಂದರೆಂದೂ ಈ ಪ್ರಯಾಣಕ್ಕೆ ಅವರಿಗೆ ೩ ವರ್ಷಗಳು ಬೇಕಾದವೆಂದೂ ಮಹಾಭಾರತ ಶಾಂತಿಪರ್ವದ ಸುಖ ಉತ್ಪತ್ತಿ ಅಧ್ಯಾಯದಲ್ಲಿ ಉಕ್ತವಾಗಿದೆ. ಕುರುಪಾಂಡವರ ಮಹಾಯುದ್ಧವಾದನಂತರ ಪಾಂಡವರು ದೇಶಜಯಿಸಲಿಕ್ಕೆಂದು ಪರಜನಾಂಗಗಳಿಗೆ ದಂಡವೆತ್ತಿ ನಡೆದರಷ್ಟೇ! ಆಗ ಅವರು ಬ್ರಹ್ಮದೇಶ, ಸಯಾಮ, ಚೀನ, ತಿಬೇಟ, ಮಂಗೋಲಿಯಾ, ತಾರ್ತರಿ, ಪರ್ಸಿಯಾ ಮುಂತಾದ ದೇಶಗಳೊಳಗಿಂದ ಹಾಯ್ದು,

ಹಿರಾತ, ಕಾಬೂಲಕಂದಹಾರಗಳ ಮಾರ್ಗವಾಗಿ ಹಿಂದೂದೇಶಕ್ಕೆ ತಿರುಗಿ ಬಂದರಂತೆ! ಕಂದಹಾರ (ಗಾಂಧಾರ) ದಲ್ಲಿ ಧೃತರಾಷ್ಟ್ರನ ಮಾವನ ಅತಿಥಿಗಳಾಗಿದ್ದರಂತೆ! ಎರಡನೇಸಲ ದಿಗ್ವಿಜಯ ಯಾತ್ರೆಗಾಗಿ ಹೊರಟಾಗ ಸಿಂಹಲದ್ವೀಪ, ಅರಬಸ್ಥಾನ, ಇಜಿಪ್ತ, ಝಾಂಝೀಬಾರ, ಆಫ್ರಿಕಾ ಮುಂತಾದವುಗಳಿಗೆ ಹೋಗಿದ್ದರೆಂದೂ ಮಹಾಭಾರತ ಸಭಾಪರ್ವದಲ್ಲಿ ಹೇಳಲ್ಪಟ್ಟಿದೆ. ಸಹದೇವನು ಮ್ಲೇಂಛರಾಜರನ್ನೂ, ತಾಮ್ರ ಮುಂತಾದ ದ್ವೀಪಗಳಲ್ಲಿರುವ ಕಾಡುಜಾತಿಯವರನ್ನೂ ಸೋಲಿಸಿದನೆಂದೂ ಉಲ್ಲೇಖವಿದೆ.

ಹಿಂದೂದೇಶದೊಳಗಿನ ರಾಜರಾದ ದಶರಥ, ಧೃತರಾಷ್ಟ್ರ, ಅರ್ಜುನ, ಅನಿರುದ್ಧ ಮುಂತಾದವರು ಪರದೇಶದಗಳ ಹೆಣ್ಣುಗಳನ್ನೇ ಲಗ್ನವಾಗಿದ್ದರೆಂಬುದು ಎಲ್ಲರಿಗೂ ಗೊತ್ತಿದೆ. ಸ್ವಾಯಂಭುವ ಮನುವಿನ ಮಗನಾದ ಪ್ರಿಯವ್ರತನು ಈ ಭೂತಲವನ್ನು ಏಳುದ್ವೀಪಗಳಾಗಿ ವಿಂಗಡಿಸಿದನು; ಅವು ಯಾವವೆಂದರೆ-- ಜಂಬುದ್ವೀಪ, (ಏಸಿಯಾ) ಪ್ಲಕ್ಷದ್ವೀಪ, (ದಕ್ಷಿಣಅಮೇರಿಕಾ) ಪುಷ್ಕರ, (ಉ. ಅಮೇರಿಕಾ) ಕ್ರೌಂಚದ್ವೀಪ, (ಆಫ್ರಿಕಾ) ಶಕದ್ವೀಪ, (ಯುರೋಪ) ಶಾಲ್ಮಲೀದ್ವೀಪ, (ಆಸ್ಟ್ರೇಲಿಯಾ) ಕುಶದ್ವೀಪ. (ಓಸ್ಯಾನಿಯಾ) ಸಂಸ್ಕೃತ ವಾಙ್ಮಯವು ಬಹು ಮಟ್ಟಿಗೆ ನಷ್ಟವಾದ್ದರಿಂದ ಪ್ರಾಚೀನ ಕಾಲದ ಈ ಹೆಸರುಗಳನ್ನು ಸರಿಯಾಗಿ ಈಗಿನ ಖಂಡಗಳಿಗೆ ಸರಿಹಚ್ಚಲು ಸಾಕಷ್ಟು ಅವಕಾಶವಿಲ್ಲ; ಮೇಲಾಗಿ ಪ್ರಳಯದಿಂದ ಈ ಖಂಡಗಳೀಗ ಬಹುಮಟ್ಟಿಗೆ ಪಲ್ಲಟವಾದ್ದರಿಂದ ಅವು ಪ್ರಾಚೀನ ಕಾಲದ ಇಂಥ ದೇಶಗಳೇ ಎಂದು ಖಂಡಿತವಾಗಿ ಹೇಳಲಿಕ್ಕೆ ಬಾರದು. ಅಂತೂ ಒಂದೂ ಪ್ರಾಚೀನ ಸಂಸ್ಕೃತಿಯು ಇಡೀ ಜಗತ್ತಿನಲ್ಲೆಲ್ಲ ಹರಡಿತ್ತೆಂದೂ, ಅದರ ಕುರುಹುಗಳು ಈಗಲೂ ಅಲ್ಲಲ್ಲಿ ನೋಡಲಿಕ್ಕೆ ಶಿಗುತ್ತವೆಂದೂ ನಿಃಸಂದೇಹವಾಗಿ ಹೇಳಬಹುದು.

---

# ೧೪ ನೆಯ ಪ್ರಕರಣ

---

## ಲಲಿತ ಕಲೆಗಳು.

**“ಭಾರತೀಯರ ಕಲಾಕೌಶಲ್ಯವನ್ನು ಕುರಿತು ಚನ್ನಾಗಿ ಅಭ್ಯಾಸ ಮಾಡಿದರೆ, ನಮ್ಮ ದೃಷ್ಟಿಯು ವಿಶಾಲವಾಗಿ ನಮಗೆ ಗೊತ್ತಿಲ್ಲದಂಥ ಹಲವು ನವಾಯಿಯ ಮಾದರಿಗಳು ನಮಗೆ ತಿಳಿದುಬರುವವು.**

—ಪ್ರೋ, ಫ್ಲೀಚರ ಸಾಹೇಬರು.

ಕಲೆಗಳಲ್ಲಿ ಕೈಗಾರಿಕೆ, ಸಂಗೀತ, ಚಿತ್ರಗಾರಿಕೆ, ನೇಕಾರಿಕೆ ಅಲ್ಲದೆ ಬೇರೆ ಬಗೆಯ ಕಲೆಗಳೂ ಒಳಗೊಳ್ಳುವವು; ಆದುದರಿಂದ ಈಗ ಒಂದೊಂದೇ ವಿಷಯವನ್ನು ನಾವು ಅನುಕ್ರಮವಾಗಿ ತೆಗೆದುಕೊಳ್ಳೋಣ. ಹಿಂದೂಜನರ ಲಲಿತಕಲಾಕೌಶಲ್ಯದ ದೆಸೆಯಿಂದ ಪಾಶ್ಚಮಾತ್ಯರು ಅವರನ್ನೆಷ್ಟು ವಿಧವಾಗಿ ಹೊಗಳಿರುವರೆಂಬುದನ್ನು ಇಲ್ಲಿ ಕೊಡುವೆವು. ಸಾಮಾನ್ಯವಾಗಿ ಹಿಂದೂಜನರ ಕಲೆಯನ್ನು ಕುರಿತು—

**ಮಿ. ಈ. ಬಿ. ಹ್ಯಾವೆಲ್ಲ ಸಾಹೇಬರು ಅನ್ನುವದು:—** ಹಿಂದೂಗಳ ನಿಜವಾದ ಕಲೆಯೆಂಬುದು ಶುದ್ಧವಿದ್ದು ಅದರಲ್ಲಿ ಹುಂಬ ಜನರ ಕಣ್ಣುಗಳನ್ನು ಹೊಲೆಗೊಳಿಸುವಂಥ ಯಾವತರದ ಗ್ರಾಮ್ಯತನವಾಗಲಿ, ಹುಚ್ಚುಚ್ಚಾರವಾಗಲಿ ಇಲ್ಲ. ಇದು ಯುರೋಪದ ಕಲೆಗಿಂತ ಸೂಕ್ಷ್ಮವೂ ಗೂಢವೂ ಇದ್ದು, ಸಾಮಾನ್ಯತರದ ಯುರೋಪಿಯರಿಗೆ ಕೂಡ ತಿಳಿಯದು. ಹಿಂದೂಗಳು ಪ್ರಾಮುಖ್ಯವಾಗಿ ಆಧ್ಯಾತ್ಮಿಕರಿದ್ದುದರಿಂದ ಅರಣ್ಯದ ಗಿಡಗಂಟಿಗಳಲ್ಲಿ ಸುಳಿಯುವ ಗಾಳಿದೇವರನ್ನು ಕಣ್ಣಾರೆ ಅವರು ಕಂಡರು; ಹಿಮಾಲಯದ ಸ್ವರ್ಗೀಯ ಅಟ್ಟದಿಂದ ಸುರಿಯುವ ಮಳೆರಾಯನನ್ನು ತಿಳಿದರು; ಮೂಡು-ಮುಳುಗುವ ಸೂರ್ಯನ ಶಕ್ತಿ ಸೌಂದರ್ಯಗಳನ್ನೂ, ಮಧ್ಯಾಹ್ನಸೂರ್ಯನ ಪ್ರತಾಪವನ್ನೂ, ಬೆಳದಿಂಗಳ ರಮಣೀಯತೆಯನ್ನೂ, ಹಾಡಿ ಅನುಭವಿಸಿ ಮಳೆಗಾಲದ ಗುಡುಗು ಮಿಂಚುಗಳ ಭೀಕರತೆಯೊಡನೆ ಒಂದಾದರು; ಹೀಗೆ ನೈಸರ್ಗಿಕ ಚಿತ್ರವಿಚಿತ್ರ ವೈವಿಧ್ಯದೊಡನೆ ದೈವಿಕ ಭಾವನೆಯಿಂದ ಒಂದಾಗುವದರಿಂದ ಹಿಂದೂಗಳಿಗೆ ಕಲೆಯ ಸ್ಫೂರ್ತಿದೇವಿಯು ಕೈವಶವಾದಳು;

ಆದರಿಂದಲೇ ಅದು ನಮ್ಮ ಕಣ್ಣು ಕುಕ್ಕಿಸಲು ಸಮರ್ಥವಾಗಿದೆ. ಯುರೋಪಿಯರಕಲೆಯೆಂದರೆ, ಪಕ್ಕವಿಲ್ಲದ ಹಕ್ಕಿ! ಅದಕ್ಕೆ ಲೌಕಿಕ ವಸ್ತುಗಳ ಸೌಂದರ್ಯ ಮಾತ್ರಗೊತ್ತು; ಭಾರತೀಯ ಕಲೆಯು ತನ್ನ ಪಕ್ಕಗಳ ಬಲದಿಂದ ತೇಜೋ ಗೋಲಗಳವರೆಗೆ ಹಾರಿ ಅಲ್ಲಿಯ ಸೌಂದರ್ಯದ ಮಾದರಿಗಳನ್ನು ಈ ಲೋಕಕ್ಕೆ ತಂದುತೋರಿಸುವದು. ನಾವು ಯುರೋಪಿಯ ಕಲೆಯನ್ನು ಕೊಂಚ ಸೂಕ್ಷ್ಮವಾಗಿ ನಿರೀಕ್ಷಿಸಿದರೆ, ರೋಮಸಾಮ್ರಾಜ್ಯವಾಗುವ ಮುಂಚಿನಿಂದಲೂ ಯುರೋಪದೊಳಗೆ ಭಾರತೀಯ ವಿಜ್ಞಾನ, ವೇದಾಂತ, ಮತ್ತು ಕಲೆಗಳು ಒಂದೇಸವನೆ ಹರಿಯುತ್ತಿದ್ದವೆಂದು ತಿಳಿಯುತ್ತದೆ. ತಲಲಿಕಲೆಯ ಸೃಷ್ಟಿಯಲ್ಲಿಯಂತೂ ಭಾರತೀಯ ಕಲೆಗೆ ಮೇಲ್ಮಣಿಯೇ ಸಲ್ಲತಕ್ಕ ಮಾತಾಗಿದೆ. ಹಿಂದೂಜನರು ಪರಕೀಯರಿಂದ ಒಮ್ಮಡಿಯಾಗಿ ತೆಗೆದುಕೊಂಡು ನೂರ್ಮಡಿಯಾಗಿ ಕೊಟ್ಟಿದ್ದಾರೆ.

**ಶಿಲ್ಪಶಾಸ್ತ್ರ:—** ಭಾರತೀಯರ ಅಚ್ಚರಿಗೊಳಿಸುವಂಥ ನಾಗರಿಕತೆಯ ಇನ್ನೊಂದು ಅಚ್ಚಳಿಯದ ಗುರುತೆಂದರೆ ಅವರ ಶಿಲ್ಪಶಾಸ್ತ್ರವು; ಶಿಲ್ಪಕಲೆಯೆಂಬುದು ರಾಷ್ಟ್ರಜೀವನ ಹಾಗೂ ರಾಷ್ಟ್ರಸ್ವಭಾವಕ್ಕೊಂದು ಕನ್ನಡಿಯಾಗಿರುವದೆಂಬ ಮಾತನ್ನು ಒಪ್ಪಿದರೆ, ಇಂದಿಗೂ ಹಿಂದುಸ್ಥಾನದಲ್ಲಿ ಅಲ್ಲಲ್ಲಿ ಮೈವೆತ್ತಿ ಮೆರೆಯುವ ಭವ್ಯ ದೇವಾಲಯಗಳು ಸೌಂದರ್ಯದಿಂದ ಶೋಭಿಸುವ ಅರಮನೆಗಳು, ಕಾಲನ ಹಲ್ಲು ಮುರಿಯುವಂತೆ ದರ್ಪದಿಂದ ನಿಂತುಕೊಂಡಿರುವ ಕೋಟೆ ಕೊತ್ತಲಗಳು, ಬೆರಗುಗೊಳಿಸುವಂಥ ಬಂಡೆಗಲ್ಲುಗಳಲ್ಲಿ ಕೊರೆದ ಗವಿಗಳು ಇವೆಲ್ಲವು ನಿಜವಾಗಿಯೇ ಭಾರತೀಯ ಶಿಲ್ಪಿಗನ ಬುದ್ಧಿ ಹಾಗೂ ಕೈ ಕೌಶಲ್ಯಗಳ ಸ್ಮಾರಕವಾಗಿವೆ. ಬಾಳಿಕೆಯಲ್ಲಿ ಬಲುಗಟ್ಟಿ, ನೋಟಕ್ಕೆ ಬಹು ಸುಂದರ ಹಾಗೂ ಭವ್ಯ ಇವೀಗ ಹಿಂದೂ ಶಿಲ್ಪಿಗನ ಕೈವಾಡದ ವಿಶಿಷ್ಟ ಲಕ್ಷಣಗಳು; ಆದುದರಿಂದಲೇ ಗಝನಿ ಮಹಮ್ಮದನು ಮಥುರಾದಿಂದ ತನ್ನ ದೇಶದ ಖಲೀಫನಿಗೆ ಪತ್ರಬರೆಯುವಾಗ "ಹಿಂದುಸ್ಥಾನದ ಕಟ್ಟಡಗಳು ಮುಸಲ್ಮಾನರ ಮತನಿಷ್ಠೆಗಿಂತ ನಿಶ್ಚಯವಾಗಿಯೂ ಕಡಿಮೆಗಟ್ಟಿಯಿಲ್ಲ" ಎಂದು ಹೇಳಿದ್ದನ್ನು ಓದಿದರೆ ಆತನ ಮನಸು ಇಲ್ಲಿಯ ಕಟ್ಟಡಗಳನ್ನು ನೋಡಿ ಎಷ್ಟು ಗಾಬುಗೊಂಡಿತ್ತೆಂಬುದು ಸ್ಪಷ್ಟವಾಗುವದು; ಗಝನೀ ಮಹಮ್ಮದನಂಥ ಮುಸಲ್ಮಾನ ಮತದ ಕಟ್ಟಾಳಿನ ಬಾಯಿಂದ

ಈ ತೆರದ ಮಾತುಗಳು ಉದುರುವದೇನೂ ಸಾಮಾನ್ಯ ಮಾತಲ್ಲ.

**ಮಿ. ಥಾರ್ನಟನ್ನರು ಅನ್ನುವದು:—** ಭಾರತೀಯ ಪ್ರಾಚೀನ ಕಟ್ಟಡಗಳೆಂದರೆ ಸಾವಿರಾರು ವರ್ಷಗಳ ಕ್ರಾಂತಿಯನ್ನು ಲೆಕ್ಕಿಸದಷ್ಟು ಅಭೇದ್ಯವಾಗಿವೆ.

**ಲಾರ್ಡ ವ್ಹ್ಯಾಲೆಂಟಿಯರು ಅನ್ನುವದು:—** ರಾಮೇಶ್ವರದ ಗೋಪುರದ ಕಟ್ಟಡದ ನೋಟವೆಂದರೆ ಅದೊಂದು ಕಣ್ಣಿಗೆ ದೊಡ್ಡ ಹಬ್ಬವೇ ಸರಿ ! ಅಂಥ ಭವ್ಯತೆಯು ಬೇರೆ ಎಲ್ಲಿಯೂ ಕಾಣದು.

ಚಿದಂಬರಂ ಗುಡಿಯ ಗೋಪುರವನ್ನು ಕುರಿತು **ಪ್ರೊ. ಹೀರನರು** ಅನ್ನುವದು:— ದೊಡ್ಡ ಕೆರೆಯ ಬದಿಗೆ ಅಚ್ಚರಿಗೊಳಿಸುವಂಥ ಕಟ್ಟಡ ಒಂದು ನಿಂತಿರುವದು. ಉದ್ದುದ್ದವಾದ ಸಾವಿರಾರು ಕಂಬಗಳಿಂದಲೂ, ಸಾವಿರಾರು ಮಂದಿ ಕುಳಿತುಕೊಳ್ಳುವಷ್ಟು ವಿಶಾಲವಾದ ಪಡಸಾಲೆಯಿಂದಲೂ ಮೆರೆಯುವ ಈ ಕಟ್ಟಡವನ್ನು ನೋಡಲು ಮನುಷ್ಯನ ಎರಡು ಕಣ್ಣುಗಳು ಸಾಲವು.

**ಕೋಲ್ಮನ್ನರು ಅನ್ನುವದು:—** ಭಾರತೀಯ ಕೈಗಾರಿಕೆಯ ಹಾಳಾದ ಭಾಗವನ್ನು ನೋಡಿದರೂ ಅದರಿಂದ ಯುರೋಪಿಯ ಶಿಲ್ಪಗರಿಗೆ ಸೌಂದರ್ಯ ಹಾಗೂ ಗಾಂಭೀರ್ಯದ ಹಲವು ಹೊಸ ವಿಚಾರಗಳು ಹೊಳೆಯಬಹುದು.

**ಮಿ. ರಸ್ಕಿನ್ನ ಸಾಹೇಬರು:—**"ದೇವರ ಬಗ್ಗೆ ಹಿಂದೂಜನರ ನಿಚ್ಚಟದ ಭಕ್ತಿ, ಸೌಂದರ್ಯದ ಬಗ್ಗೆ ಅವರ ಬಹು ಸೂಕ್ಷ್ಮ ಕಲ್ಪನೆ, ಇವೆಲ್ಲವು ಭಾರತೀಯ ಶಿಲ್ಪಕಲೆಯಲ್ಲಿ ಮೂರ್ತಿಮತ್ತಾಗಿ ಒಡಮೂಡಿರುತ್ತವೆ.

**ಮಿ. ರೀ ಸಾಹೇಬರು:—** ಭಾರತೀಯರ ಶಿಲ್ಪಕಲೆಯ ಸೌಂದರ್ಯದ ನೆರಳು ಯುರೋಪದಲ್ಲಿಯ ಕ್ರಿಸ್ತ ದೇವಾಲಯಗಳಲ್ಲಿಯೂ ಕಂಡು ಬರುವದು.

**ಮಿ. ಹಾರ್ಡಿಯವರು:—** ಮಧ್ಯ ಅಮೇರಿಕದಲ್ಲಿರುವ ಚಿಚೆನ್ನದ ಪ್ರಾಚೀನ ಕಟ್ಟಡವು ಹಿಂದುಸ್ಥಾನದಲ್ಲಿಯ ಸ್ತೂಪಗಳಿಗೆ ಬಹು ಮಟ್ಟಿಗೆ ಹೋಲುತ್ತದೆ.

**ಪಟ್ಟಣ ರಚನೆ:—** ಪಟ್ಟಣ—ಕಟ್ಟಣದಲ್ಲಿ ಭಾರತೀಯರು ಬಹು

ಮುಂದರಿದಿದ್ದರು. ಋಗ್ವೇದ ಕಾಲದಿಂದಲೂ ಪಟ್ಟಣ ಕಟ್ಟುವ ಶಾಸ್ತ್ರವು ಬೆಳೆಯುತ್ತ ಮುಂದೆ ಮಾನಸಾರವೆಂಬುದೊಂದು ದೊಡ್ಡ ಗ್ರಂಥವೇ ಹೊರಟಿತು. ಈ ಗ್ರಂಥದಲ್ಲಿ ೪೦ ಪ್ರಕಾರದ ಹಳ್ಳಿ ಪಟ್ಟಣಗಳ ರಚನೆಯ ವರ್ಣನೆಯಿದೆ; ಹಳ್ಳಿಯಾಗಲಿ, ಪಟ್ಟಣವಾಗಲಿ, ಸಮಕೋನ ಆಕ್ರತಿಯುಳ್ಳದ್ದು ಬೀದಿಗಳು ಪೂರ್ವ ಪಶ್ಚಿಮಾಭಿಮುಖವಾಗಿರುತ್ತಿದ್ದವು; ಹೀಗೆ ಬೀದಿಗಳನ್ನು ಕಟ್ಟುವುದರಲ್ಲಿ ಗಾಳಿ-ಬೆಳಕುಗಳ ಸಮೃದ್ಧಿಯಾಗಿರಬೇಕೆಂಬುದೇ ಅವರ ಉದ್ದೇಶವಿತ್ತು; ಪಾಟಲೀಪುತ್ರಪಟ್ಟಣವು ಅನೇಕ ಹಳ್ಳಿಗಳು ಕೂಡಿ ಒಂದು ವಿಶಾಲವಾದ ಪಟ್ಟಣವಾಗಿತ್ತು; ಅಲ್ಲಲ್ಲಿ ದೊಡ್ಡ ದೊಡ್ಡ ಉಪವನಗಳೂ ವಿಶಾಲವಾದ ರಾಯಬೀದಿಗಳೂ ಅಲ್ಲಿ ಕಂಗೊಳಿಸುತ್ತಿದ್ದವು.

**ಮಿ. ಹ್ಯಾವೆಲ್ಲರು:—** "ಭಾರತೀಯರ ಪಟ್ಟಣ ರಚನೆಯ ಶಾಸ್ತ್ರವನ್ನು ತಿಳಿಯುವದೆಂದರೆ, ಯುರೋಪಿಯ ಶಿಲ್ಪಿಗರಿಗೊಂದು ಹೊಸ ದರ್ಶನವೇ ಇರುವದು; ಪ್ರಗತಿಹೊಂದಿದ ಯುರೋಪದ ಈಗಿನ ಶಾಸ್ತ್ರವು ಕೂಡ ಪ್ರಾಚೀನ ಹಿಂದುಸ್ಥಾನದಂತೆ ಉಪವನಗಳುಳ್ಳ ಪಟ್ಟಣಗಳನ್ನು ಕಟ್ಟುವ ದಾರಿಯನ್ನು ಇನ್ನೂ ಹಿಡಿದಿಲ್ಲ."

**ಬಂಡೆಗಲ್ಲಿನಲ್ಲಿ ಕೊರೆಯಲ್ಪಟ್ಟ ಗವಿಗಳು:—** ಗುಡ್ಡಗಳಲ್ಲಿ ಕೊರೆಯಲ್ಪಟ್ಟ ಗವಿಗಳು ಭರತಖಂಡದಲ್ಲಿ ವಿಪುಲವಾಗಿವೆ. ಗುಡ್ಡಗಳನ್ನು ಕೊರೆದು ಗವಿಗಳನ್ನು ಕಟ್ಟುವ ಸಂಪ್ರದಾಯವು ಮೊದಲು ಬೌದ್ಧರ ವಿಹಾರ ಮತ್ತು ಚೈತ್ಯಾಲಯಗಳಿಂದ ಪ್ರಾರಂಭವಾಯಿತು. ಕೊರೆಯಲ್ಪಟ್ಟ ಈ ಗವಿಗಳಿಂದ ಆ ಕಾಲದ ಜನರ ಶಿಲ್ಪಕಲಾ ಪ್ರತಿಭೆಯು ವ್ಯಕ್ತವಾಗುವದು. ವಾಸ್ತುವಿದ್ಯೆಯಲ್ಲಿ ಕೆತ್ತನೆಯ ಶಿಲ್ಪಿಯಲ್ಲಿ, ಭಾರತೀಯರು ಇಂದಿಗೂ ಜಗಕ್ಕೆ ಮೀರಿನಿಂತಿರುವರು.

**ಮಿ. ಹ್ಯಾವೆಲ್ಲರನ್ನುವದು:—** ಹಿಂದೂದೇಶದ ಕಟ್ಟಡಗಳಲ್ಲಿ ಯಾರಿಗಾದರೂ ಕಂಡುಬರುವ ಆಶ್ಚರ್ಯದ ಸಂಗತಿಯಾವುದೆಂದರೆ, ಚಿತ್ರಗಳಲ್ಲಿಯ ಅತಿಸೂಕ್ಷ್ಮವಾದ ಕೆತ್ತಿಗೆಯ ಕೆಲಸವು; ಈ ಚಿತ್ರಗಳನ್ನು ಕೆತ್ತುವಾಗ ಭಾರತೀಯ ಚಿತ್ರಶಿಲ್ಪಿಗಳು ಚಿತ್ರದ ಸೌಂದರ್ಯಕ್ಕೆ ಎಳ್ಳಷ್ಟಾದರೂ ಕುಂದುಂಟಾಗದಂತೆ ಮಾಡಿದ್ದಲ್ಲದೆ ಅವರು ತೋರಿಸಿದ ಕೈಚಾತುರ್ಯ,

ಬುದ್ಧಿಯ ಕಲ್ಪಕತೆ, ಇವುಗಳು ಸಮತೂಕವಾಗಿ ಸಾಧಿಸಿರುವವು. ಪರಂಪರೆಯ ಶಿಲ್ಪಶಾಸ್ತ್ರವೆಂಬುದೊಂದು ಹಿಂದುಸ್ಥಾನದ ಬೆಲೆಯಿಲ್ಲದ ನಾಗರಿಕತೆಯ ಅಳಿಯದ ಕುರುಹಾಗಿದೆ.

**ಮಿಸೆಸ್ ವ್ಯಾನಿಂಗರು ಅನ್ನುವದು:**— ಗೋಡೆಗಳ ಮೇಲೆ ಬಣ್ಣದ ಚಿತ್ರ ಕೊರೆಯಲಿಕ್ಕೆ ಈ ಗವಿಗಳು ಬಹು ಯೋಗ್ಯವಾದವುಗಳು; ಇವುಗಳಲ್ಲಿ ಕೊರೆಯಲ್ಪಟ್ಟಿರುವ ಚಿತ್ರಗಾರಿಕೆಯು ಪಾಂಪಿಯೊಳಗಿನ ಕಿಂತಲೂ ಬಹು ಅಂದವೂ ನುಣುಪೂ ಆಗಿದೆ.

**ಸರ ವಿಲಿಯಂ ಹಂಟೆರರು ಅನ್ನುವದು:**— ಮುಸಲ್ಮಾನರು ಭಾರತೀಯ ವಾಸ್ತುಶಾಸ್ತ್ರದಲ್ಲಿ ತಮ್ಮ ದೇಶದ ಪದ್ಧತಿಯನ್ನು ಕೂಡಿಸಿದ್ದರೂ, ಮೊಗಲ ರಾಜಧಾನಿಯ ಅರಸು-ಕಟ್ಟಡಗಳಲ್ಲಿ ಭಾರತೀಯ ಶಿಲ್ಪ ಕಲೆಯೇ ಮುಖ್ಯವಾಗಿ ಒಡೆದು ಕಾಣುವದು.

**ಮಿ. ವ್ಹಿನ್ಸೆಂಟ ಸ್ಮಿಥರು ಅನ್ನುವದು:**— ಕಲ್ಲುಗಳಲ್ಲಿ ತರತರದ ಮಾದರಿಯ ಮತ್ತು ಆಕೃತಿಯ ಹೂಗಳನ್ನು ಕೆತ್ತುವ ಕೈಗಾರಿಕೆಯಲ್ಲಿ ಹಿಂದೂಗಳನ್ನು ಯಾರೂ ಹಿಂದೆ ಹಾಕಲರಿಯರು.

**ಕರ್ನಲ್ ಟಾಡ್ಡರು ಅನ್ನುವದು:**— ಭಾರತೀಯ ಶಿಲ್ಪ ಹಾಗೂ ವಾಸ್ತುಕಲೆಯ ವೈವಿಧ್ಯವನ್ನೂ, ಭವ್ಯತೆಯನ್ನೂ ಬಣ್ಣಿಸುವದೆಂದರೆ, ಕೈಮೀರಿದ್ದು; ಎಷ್ಟು ಬರೆದರೂ ಮನಸು ದಣಿಯದು; ತಮ್ಮ ಬುದ್ಧಿ ಸಂಪತ್ತೆನ್ನೆಲ್ಲ ಭಾರತೀಯರು ಇದರಲ್ಲಿ ಸೂರೆ ಮಾಡಿದಂತೆ ಕಾಣುತ್ತದೆ.

**ಅಬುಲ್‌ಫಜಲರು ಐನಿಅಕಬಾರಿಯಲ್ಲಿ ನುಡಿಯುವದು:**— ಜಗನ್ನಾಥಪುರಿ ಹತ್ತರ ಇರುವ ಕೊನಾರಕ ಎಂಬಲ್ಲಿಯ ಸೂರ್ಯ ದೇವಾಲಯವನ್ನು ಕಟ್ಟಲಿಕ್ಕೆ ತತ್ಕಾಲಕ್ಕೆ ೧೨ ವರ್ಷದ ರಾಜ್ಯದ ಕಂದಾಯ ವೆಚ್ಚವಾಯಿತಂತೆ ! ಈ ಕಟ್ಟಡವನ್ನು ನೋಡಿದರೆ, ಸೂಕ್ಷ್ಮ ಬುದ್ಧಿಯವರು ಕೂಡ ಬೆರಗುಗೊಳ್ಳುವರು.

**ಕರ್ನಾಟಕದಲ್ಲಿಯ ಕಟ್ಟಡ ಹಾಗೂ ಗವಿಗಳು:**— ಗುಡ್ಡದಲ್ಲಿಯೂ ಬಂಡೆಗಲ್ಲುಗಳಲ್ಲಿಯೂ ಕೊರೆದ ಗುಡಿಗಳು ಕನ್ನಡಿಗರ ವಿಶಿಷ್ಟ ಕೈಮೆಗಳೆನ್ನಬಹುದು; ಇಂಥ ಗುಡಿಗೋಪುರಗಳು, ಗವಿಗಳು ಕರ್ನಾಟಕದಲ್ಲಿ ವೆಗ್ಗಳವಾಗಿರುವವು; ಮತ್ತು ವಿಶೇಷ ಅಭಿಮಾನದ ಸಂಗತಿಯೆಂದರೆ,

ಇವುಗಳಿಗೆಲ್ಲ ಕನ್ನಡ ಚಕ್ರವರ್ತಿಗಳೇ ಪ್ರೋತ್ಸಾಹಕರು ಇದ್ದರು; ಕನ್ನಡ ಶಿಲ್ಪಿಗಳ ಅಗಾಧ ಬುದ್ಧಿಯು ಬಾದಾಮಿ, ವೆರೂಳ, ಪಟ್ಟದಕಲ್ಲ, ಐಹೊಳೆ, ಇಟಗಿ ಹಂಪೆ, ಕಾರ್ಕಳ ಮುಂತಾದ ಊರುಗಳಲ್ಲಿರುವ ಗುಡಿಗವಿಗಳ ಕಟ್ಟಣ, ಕೆತ್ತನೆಯ ಕೆಲಸಗಳಲ್ಲಿ ಪ್ರಕಟವಾಗಿದ್ದು ತಮ್ಮ ಒಳಗಿನ ಸೌಂದರ್ಯ, ಪ್ರಭೆ ಮುಂತಾದವುಗಳನ್ನು ಹೊರಪಡಿಸಿ ಅದರದೊಂದು ಪ್ರದರ್ಶನವನ್ನೇ ಹೂಡಿರುವಂತೆ ಭಾವನೆಯಾಗುತ್ತದೆ. ಅವರು ಮೇಣದಲ್ಲಿ ತೋರಿಸುವ ಚಾತುರ್ಯವನ್ನು ಕಲ್ಲುಗಳಲ್ಲಿ ತೋರಿಸಿದ್ದಾರೆ.

**ಜೇಮ್ಸ ಫರ್ಗ್ಯುಸನ್ನರು ಅನ್ನುವದು:**— ಚಾಲುಕ್ಯರ ಕಟ್ಟಣ ಹಾಗೂ ಕೆತ್ತನೆಯ ಕೆಲಸದಲ್ಲಿ ಆರ್ಯರ ಮಿದುಳು ಮತ್ತು ದ್ರವಿಡರ ಕೈ ಇವೆರಡೂ ಬಹು ಸುಂದರವಾಗಿ ಬೆರತಂತೆ ಕಾಣುತ್ತವೆ; ಒಂದೇ ಮಾತಿನಲ್ಲಿ ಹೇಳಬೇಕೆಂದರೆ, ಕರ್ನಾಟಕವು ಆರ್ಯ-ದ್ರವಿಡ ಸಂಸ್ಕೃತಿಗಳ ಸಂಗಮವೆಂದೆನ್ನಬಹುದು. ಶಿಲ್ಪವು ಹಿಂದುಸ್ಥಾನದಲ್ಲಿ ಜೀವಂತವಿದೆ; ಹುಂಬರು ಕೂಡ ಶ್ರೇಷ್ಠ ಶಿಲ್ಪಿಗರಿರುವರು.

**ಮಿ. ಮೆಡೋಜ ಟೇಲರರು** ಇಟಗಿಯ ಮಹಾದೇವರ ಗುಡಿಯ ಬಗ್ಗೆ ಅನ್ನುವದು:—ಈ ದೇವಾಲಯದಲ್ಲಿ ಕೊರೆದಿರುವ ಕೆಲವು ಕಂಬಗಳು ಬಾಗಿಲುಗಳು ಮುಂತಾದವುಗಳನ್ನು ವರ್ಣಿಸಲು ಸಾಧ್ಯವಿಲ್ಲ. ಇಂಥ ಕುಸುರಿನ ಕೆಲಸವನ್ನು ಭಂಗಾರ ಬೆಳ್ಳಿಯಲ್ಲಾದರೂ ಮಾಡುವದು ಸಾಧ್ಯವಿತ್ತೋ ಹೇಗೆ ಹೇಳಲಾಗದು.

**ಡಾ. ಫರ್ಗ್ಯುಸನ್ನರು ಅನ್ನುವದು:**— ಬೇಲೂರು ಹಳೇಬೀಡಿನ ದೇವಾಲಯಗಳು ಜೇನುಗು ಕುಸುರಿನ ಕೆಲಸದಲ್ಲಿ ಜಗದಲ್ಲಿರುವ ಎಲ್ಲ ಗುಡಿಗಳಿಗೂ ಮೀರಿವೆ. ಇವನ್ನು ಕಟ್ಟಲಿಕ್ಕೆ ಪಟ್ಟ ಶ್ರಮಕ್ಕೆ ಲೆಕ್ಕವಿಲ್ಲ. ಈ ಗುಡಿಗೆ ಸಮವಾದ ಕಟ್ಟಡವು ಜಗತ್ತಿನಲ್ಲಿಯೇ ಕಾಣದು. ಕೈವಾಡದವರು ಇಲ್ಲಿ ತಮ್ಮ ಸುಂದರವಾದ ಶಿಲ್ಪಕಲೆಯ ಸುಗ್ಗಿಯನ್ನೇ ಸಾಧಿಸಿದ್ದಾರೆ.

**ಮಿ. ರೇ ಸಾಹೇಬರು:**— ಹಂಪೆಯ ವಿಜಯ ವಿಠ್ಠಲ ದೇವಸ್ಥಾನವನ್ನು ಬಣ್ಣಿಸುವಾಗ ಪರವಶರಾಗಿ ಅಭಿಪ್ರಾಯಪಡುವದು:— ಈ ಗುಡಿಯು ಕೈಕೆಲಸದಲ್ಲಿ ಅಂದರೆ ಹೂಬಳ್ಳಿಗಳ ಸುಳಿಗಳನ್ನು ಕೆತ್ತುವದರಲ್ಲಿಯೂ

ಸೌಂದರ್ಯ-ಭವ್ಯತೆಗಳು ಕೊನೆಯ ಮೆಟ್ಟಲನ್ನು ಮುಟ್ಟಿವೆ. ಕೆತ್ತನೆಯ ಕೆಲಸದಲ್ಲಿ ಶಿಲ್ಪಿಗರ ಕೈಯು ಸರಾಗವಾಗಿ ತಡೆಯಿಲ್ಲದೆ ಓಡಿರುವದು.

**ಮಿ. ಗ್ರಿಫಿಥರು ಅನ್ನುವದು:**— ನೂರಾರು ಗವಿಗಳನ್ನು ನಾನು ನೋಡಿರಬಹುದು; ಆದರೆ ಒಂದರಲ್ಲೂ ಶಿಲ್ಪಿಗರು ತಪ್ಪಿದ್ದನ್ನು ನಾನು ಕಾಣಲಿಲ್ಲ.

**ಪ್ರೊ. ಹೀರಸರು ಅನ್ನುವದು:**— ವೇರೂಳಿನ ಕೈಲಾಸ ದೇವಾಲಯದ ಕಟ್ಟಣ ಕೆತ್ತನೆಗಳಲ್ಲಿ ಅದ್ಭುತ, ಸುಂದರ, ಮತ್ತು ಸೊಬಗಿನ ಕೆಲಸವೆಲ್ಲವೂ ನೋಡಲಿಕ್ಕೆ ಸಿಗುವದು.

**ಮಿಸೆಸ್ ಮ್ಯಾನಿಂಗರು ಅನ್ನುವದು:**— ಕೈಲಾಸ ಹಾಗೂ ಬೇರೆ ಗವಿಗಳು ಮನುಷ್ಯನಲ್ಲಿ ಅದ್ಭುತ ಮತ್ತು ಆಶ್ಚರ್ಯ ಭಾವಗಳನ್ನುಂಟು ಮಾಡುತ್ತವೆ.

**ಗ್ಲ್ಯಾಡಸ್ಟನ್ ಸೋಲೋಮನ್ನರು ಬರೆಯುವದು:**— ಎಳ್ಳೂರಿನ ಗವಿದೇವಾಲಯಗಳ ಬಗ್ಗೆ— ಇಲ್ಲಿಯ ದೆವ್ವಿನಂಥ ಗುಡ್ಡದ ಒಂದೇ ಒಂದು ಬಂಡೆಗಲ್ಲಿನಲ್ಲಿ ಕೊರೆದ ಅತಿ ಪ್ರಚಂಡ ದೇವಾಲಯ, ಅದರಲ್ಲಿ ಕೊರೆದ ದೊಡ್ಡ ದೊಡ್ಡ ಆನೆಗಳು, ದೇವತೆಗಳ ಯುದ್ಧ, ರೆಕ್ಕೆಗಳುಳ್ಳ ಅಪ್ಸರೆಯರು ಮುಂತಾದ ಗೊಂಬೆಗಳನ್ನು ನೋಡುವ ಮನುಷ್ಯನ ಮನಸು ಹುಚ್ಚಾಗುವದು.

**ಲಾರ್ಡ ರೋನಾಲ್ಡಸೆಯವರು ಉಸುರಿದ್ದು:**— ಇದು ಕಲ್ಲಿನಲ್ಲಿ ಕೊರೆದದ್ದೊಂದು ಆಶ್ಚರ್ಯಕರ ನೋಟ; ಶಿವನು ಕೈಲಾಸದಲ್ಲಿರುವನೆಂಬ ತಮ್ಮ ಮೆದುಳಿನಲ್ಲಿ ಮುದುಡಿಕೊಂಡಿರುವ ಕಲ್ಪನೆಯನ್ನು ತಮ್ಮ ಕೈಮಾಟಗಾರಿಕೆಯಿಂದ ಶಿಲ್ಪಪ್ರಭುಗಳು ಇದನ್ನು ಕೊರೆದು ರೂಪುಗೊಳಿಸಿದ್ದಾರೆ.

**ಚಿತ್ರಗಾರಿಕೆ:**— ಭಾರತೀಯರು ಚಿತ್ರಕಲೆಯನ್ನೂ ಚೆನ್ನಾಗಿಯೇ ಬೆಳೆಯಿಸಿದ್ದರು; ಅರಮನೆಯಲ್ಲಿಯ ಅರಸು ಕನ್ನಿಕೆಯರಿಗೆ ಈ ಚಿತ್ರಕಲೆಯ ಅಭಿರುಚಿಯು ವಿಶೇಷವಾಗಿರುತ್ತಿತ್ತೆಂದು ಭಾರತ ಮುಂತಾದ ಪುರಾಣಗಳಿಂದ ತಿಳಿಯುತ್ತದೆ; ಭಾರತೀಯರು ತಮ್ಮ ಚಿತ್ರಕಲೆಯನ್ನೂ, ಬಣ್ಣಗಾರಿಕೆಯನ್ನೂ ಅನೇಕ ಬಗೆಯ ಶೋಧಮಾಡಿ ಪೂರ್ಣಸ್ಥಿತಿಗೆ ತಂದಿಟ್ಟರು;

ಚೀನರು ಚಿತ್ರಕಲೆಯನ್ನು ಇವರಿಂದಲೇ ಕಲಿತರು; ಚಿತ್ರಕಲೆಯ ಬಗ್ಗೆ

**ಮಿ. ಗ್ರಿಫಿಥ ಸಾಹೇಬರು ಮತಪಡುವದು:—** ಅಜಂತೆಯ ಗವಿಗಳಲ್ಲಿ ಚಿತ್ರಕೊರೆದ ಚಿತ್ರಗಾರರು ತಮ್ಮ ಕಲಾನಿರ್ವಹಣೆಯಲ್ಲಿ ಅದ್ಭುತ ಬುದ್ಧಿಶಾಲಿಗಳಿದ್ದರು. ಕುಂಚಿನಿಂದ ಎಳೆದಲ್ಲೆಲ್ಲ ವಿಲಕ್ಷಣವಾದ ಸೌಂದರ್ಯವೇ ಮಿಂಚಿದೆ. ಒಳಮಾಳಿಗೆಯ ಮೇಲೆ ಕೂಡ ಅಸಿಮಿಸಿಗೊಳ್ಳದೆ ಪ್ರಮಾಣಬದ್ಧವಾಗಿಯೂ ಸಂದೇಹವಿಲ್ಲದೆಯೂ ಕುಂಚಿನಿಂದ ಸವರಿದ ಗೆರೆ, ಆಕೃತಿ ಮುಂತಾದವುಗಳನ್ನು ನೋಡಿದರಂತೂ ಇದು ಮನುಷ್ಯರ ಕೈಕೆಲಸ ಅಹುದೋ ಅಲ್ಲವೋ ಎಂಬುವ ಮಟ್ಟಿಗೆ ಸೋಜಿಗವೆನಿಸುತ್ತದೆ.

**ಅಬುಲ್‌ಫಜಲ ಸಾಹೇಬರು ಬರೆದಿಟ್ಟಿದ್ದು:—** ಹಿಂದೂ ಜನರ ಚಿತ್ರಗಾರಿಕೆಯು ಕಲ್ಪನೆಗೆ ಮೀರಿದ ಮಾತು; ಇವರನ್ನು ಸರಿಗಟ್ಟುವವರು ಜಗದೊಳಗೆ ವಿರಳ.

**ಗ್ಲ್ಯಾಡಸ್ಟನ್ ಸೋಲೋಮನ್ನ:—** ಇವರು ಅಜಂಟಾದೊಳಗಿನ ಹಿಂದೂಜನರ ಬಣ್ಣ ಕೊರೆಯುವ ಕೈಗಾರಿಕೆಯನ್ನು ಬಾಯಿತುಂಬ ತಮ್ಮ ಚಾರ್ಮ ಆಫ ಇಂಡಿಯನ್ ಆರ್ಟ ಎಂಬ ಪುಸ್ತಕದಲ್ಲಿ ಬಣ್ಣಿಸಿದ್ದಾರೆ.— "ಅಜಂತೆಯ ಕೈ ಮಾಟದೊಳಗೆ ಸ್ತ್ರೀಪೂಜೆಗೆ ಕೊಟ್ಟ ಮಹತ್ವಕ್ಕೆ ಎಣೆಯಿಲ್ಲ; ಇಷ್ಟು ಮಟ್ಟಿಗೆ ಸ್ತ್ರೀಜಾತಿಗೆ ಯಾರೂ ಎಲ್ಲಿಯೂ ಸಂಪೂರ್ಣ ಮರ್ಯಾದೆ ಕೊಟ್ಟಿರಲಿಕ್ಕಿಲ್ಲ; ಹಿಂದೂಜನರು ಅಜಂತೆಯಲ್ಲಿ ಹೆಂಗಸನ್ನು ಬರಿಯ ಒಂದು ವ್ಯಕ್ತಿಯೆಂದು ಬಗೆಯದೆ, ಒಂದು ತತ್ವಾಭಿಮಾನಿ ದೇವತೆಯೆಂದು ತಿಳಿದಿರುವರು; ಸ್ತ್ರೀಯಲ್ಲಿ ಜಗದ ಸೌಂದರ್ಯವೆಂಬುದು ರೂಪವೆತ್ತಿ ಮೆರೆಯುತ್ತಿದೆ. ಸ್ತ್ರೀಯಳು ನಿಜವಾಗಿ ಕಲೆಗೆ ಮೀರಿದವಳು; ಆದಾಗ್ಯೂ ಅವಳಿಂದಲೇ ಮಾನವಜಾತಿಯು ರೂಪುಗೊಳ್ಳುವದರಿಂದ ಅವಳನ್ನು ಎಷ್ಟು ಬಗೆಯ ಬಣ್ಣದಿಂದ ಎಷ್ಟು ಬಗೆಯಲ್ಲಿ ಬಣ್ಣಿಸಿದರೂ ಅಜಂತೆಯ ಕೈಗಾರಿಕರಿಗೆ ತೃಪ್ತಿಯಿಲ್ಲ; ಆಕೆಯ ಕಣ್ಣಿನ ಓರೆ ನೋಟ, ಅವಳ ನಡೆಯ ಒಯ್ಯಾರ; ಅವಳ ಮುಖದ ಮುರಕ ಇವುಗಳಲ್ಲಿ ಯಾವುದನ್ನೂ ಅವರು ಅಲಕ್ಷಿಸಲಿಲ್ಲ; ಹೆಣ್ಣೆಂದರೆ ಅವರ ಕಣ್ಣಿಗೆ ಹೂವಾಗಿರುವಂತೆ ಸ್ಪಷ್ಟವಾಗುತ್ತದೆ."

**ಸಂಗೀತಶಾಸ್ತ್ರ:—** ಮನುಷ್ಯನ ಎದೆಯೆಂಬ ಗವಿಯಲ್ಲಿ ಅಡಗಿ

ರುವ ಗೂಢಭಾವನೆಗಳು ಹರಿಯಲು ಯಾವುದಾದರೊಂದು ಆತಂಕವಿಲ್ಲದ ದಾರಿಯಿದ್ದರೆ ಅದು ಸಂಗೀತವೇ; ಅಂತೆಯೇ ಇದಕ್ಕೆ ಚೀನರು 'ಅರಸು ಶಾಸ್ತ್ರ' ವೆಂದೆನ್ನುವದುಂಟು; ಸಂಗೀತವು ಚಿಕ್ಕವರಿಗೆ ಪ್ರಿಯವು; ದೊಡ್ಡವರಿಗೆ ಅಪ್ರಿಯವೆಂತಲ್ಲ; ಮಾನವನು ಲೀಲೆಯಿಂದ ತನ್ನ ಆಲಾಪನೆಯ ಹೊರಳಿಕೆಯನ್ನು ಹೊರಳಿಸುವದಲ್ಲದೆ ಅದರಿಂದ ಪಶುಗಳನ್ನು ಕೂಡ ಹುಚ್ಚುಮಾಡುವಂಥ ಶಾಸ್ತ್ರವಿದು. ಭಾರತೀಯರು ಸಂಗೀತಪ್ರಿಯರು; ಸಂಗೀತಶಾಸ್ತ್ರಜ್ಞರು; ಅಷ್ಟೇ ಅಲ್ಲದೆ ಅದರಲ್ಲಿ ನೈಪುಣ್ಯವನ್ನು ಪಡೆದವರು; ಭಾರತೀಯರ ಸಂಗೀತಶಾಸ್ತ್ರಕ್ಕೆ ಸಾಮವೇದವೇ ಬೊಡ್ಡಿ; ಇದರಿಂದಲೇ ಮುಂದೆ ಸಂಗೀತಶಾಸ್ತ್ರವೆಂಬ ಮಹಾವೃಕ್ಷವು ಬೆಳೆದು ಹೆಮ್ಮರವಾಯಿತು.

**ಆನ್ನಿ ಸೆ. ವಿಲ್ಸನ್ನರು ಅನ್ನುವದು:—** ಭಾರತೀಯರು ಬಹು ಸಂಗೀತಪ್ರಿಯರು; ದಿನದೊಳಗೆ ತಾಸು ತಾಸಿಗೂ ವರ್ಷದೊಳಗಿನ ಪ್ರತಿಯೊಂದು ಋತುಗಳಿಗೂ ಒಂದೊಂದು ಬೇರೆ ಬೇರೆ ರಾಗವಿಶೇಷಗಳಿದ್ದುದನ್ನು ಲಕ್ಷಿಸಿದರೆ ಭಾರತೀಯರು ಸಂಗೀತದಲ್ಲಿ ಎಷ್ಟು ತಲ್ಲೀನರಾಗಿದ್ದರೆಂಬುದು ಒಡೆದು ಕಾಣುತ್ತದೆ. ಬರೆಯಲ್ಪಟ್ಟ ಶಾಸ್ತ್ರಗಳಲ್ಲಿ ಹಿಂದೂ ಸಂಗೀತಶಾಸ್ತ್ರವೇ ಅತಿ ಹಳೆಯದು.

**ಮಿ. ಕೋಲ್ಮನ್ನರು ಅನ್ನುವದು:—** ಭಾರತೀಯ ಸಂಗೀತಶಾಸ್ತ್ರಕ್ಕೆ ಯುರೋಪಿಯ ಸಂಗೀತಕ್ಕಿಂತ ಪ್ರಬಲವಾದ ತಳಹದಿಯುಂಟು;

**ಕರ್ನಲ್ ಟಾಡ್‌ಸಾಹೇಬರು ಅನ್ನುವದು:—** ನಮಗೀಗ ಗೊತ್ತಿದ್ದಮಟ್ಟಿಗೆ ವಿಚಾರಿಸಿದರೆ, ಯುರೋಪಿಯ ಬುದ್ಧಿಗೆ ನಿಲುಕದಷ್ಟು ಭಾರತೀಯ ಸಂಗೀತಶಾಸ್ತ್ರವು ಮುಂದರಿದಿದೆ; ಅದು ಸಂಸ್ಕೃತ ವಾಙ್ಮಯದಷ್ಟೇ ಪ್ರಾಚೀನವಿದೆ. ಮುಸಲ್ಮಾನರು ತಮ್ಮ ಆಳಿಕೆಯ ದಿನಗಳಲ್ಲಿ ಆರ್ಯಸಂಗೀತವನ್ನೇ ಎತ್ತಿಹಿಡಿದು ಅದನ್ನು ತಮ್ಮದನ್ನಾಗಿಯೇ ಮಾಡಿಕೊಂಡರು."

ಸಂಗೀತಶಾಸ್ತ್ರವನ್ನು ಸಾಕಲ್ಯವಾಗಿ ವಿವರಿಸುವಂಥ ಗಂಧರ್ವವೇದವೆಂಬುದಿತ್ತು; ಅದು ಕಳೆದುಹೋಗಿದೆ; ಹಿಂದೂಸಂಗೀತಶಾಸ್ತ್ರಕ್ಕೆ ಅದೇ ಬುಡಕಟ್ಟು. ಹಿಂದೀಸಂಗೀತದಲ್ಲಿ ಅಸಂಖ್ಯಾಕ ರಾಗ-ರಾಗಿಣಿಗಳು ಅವೆ;

ಅವು ಒಂದಕ್ಕೊಂದು ಸ್ವಲ್ಪಮಾತ್ರ ಭಿನ್ನವಾಗುವವು. ಅದು ಬರಿಯ ಭಾವನಾಪ್ರಧಾನವಿದ್ದು, ಕೊನೆಯಲ್ಲಿ ಅಧ್ಯಾತ್ಮಮಂಡಲಕ್ಕೆ ಒಯ್ಯುವದು; ಆದುದರಿಂದಲೇ ತಾನಸೇನರಂಥ ಮಿಗಿಲಾದ ಗಾಯಕರು ಸ್ವರ್ಗೀಯ ಸುಖವನ್ನನುಭವಿಸುವರಂತೆ ಜಗವನ್ನೂ ಅಲಕ್ಷಿಸುತ್ತಾರೆ. ಶ್ರೇಷ್ಠಗಾಯಕರು ಜೀವನ್ಮುಕ್ತರಂತೆ ಇರುವ ಮಾತು ಭಾರತೀಯರಿಗೆ ಅರಿಯದ ಸಂಗತಿಯಲ್ಲ. ನಾಯಿಕ ಗೋಪಾಲ ಹಾಗೂ ತಾನಸೇನರ ಗಾನಪ್ರಭುತ್ವದ ಬಗ್ಗೆ **ಮಿ. ವ್ಹಿಟನ್ ಸಾಹೇಬರು ಬರೆಯುವದು**:— ನಾಯಿಕ ಗೋಪಾಲನು ಅಕಬರನ ಬಲವಂತಕ್ಕಾಗಿ ದೀಪಕರಾಗವನ್ನು ಹಾಡಬೇಕಾಯಿತು; ಇದು ವೇಳೆಯಲ್ಲವೆಂದು ಗಾಯಕನು ಹೇಳಿದರೂ ಕೇಳಲಿಲ್ಲ; ಆಗ ಗಾಯಕನು ಅಕಬರನಿಗೆ ಯಮುನೆಯಲ್ಲಿ ಮುಳುಗಿರಲಿಕ್ಕೆ ಹೇಳಿ ತಾನು ಹಾಡಲಾರಂಭಿಸಿದನು; ಇತ್ತ ಗಾಯಕನು ಆ ರಾಗದ ಆಲಾಪನೆನಡಿಸಲು ನೀರಿನಲ್ಲಿ ಮುಳುಗಿದ್ದ ಅಕಬರನಿಗೆ ದೀಪದ ಝಳ ತಾಕತೊಡಗಿತಂತೆ! ಮತ್ತೊಂದು ಐತಿಹ್ಯ. ತಾನಸೇನನು ಅಕಬರನ ಆಗ್ರಹಕ್ಕಾಗಿ ಒಂದು ದಿನ ಮಧ್ಯಾಹ್ನಸಮಯದಲ್ಲಿ ರಾತ್ರಿಹಾಡುವ ಶ್ರೀರಾಗವನ್ನು ಮಾಡತೊಡಗಲು, ಅವರು ಕುಳಿತಿರುವ ಸ್ಥಳಮಾತ್ರವೇ ಕತ್ತಲೆಯಿಂದ ಕವಿಯಿತಂತೆ. ಇದೀಗ ಭಾರತೀಯ ಸಂಗೀತದ ಅಗಾಧ ಮಹಿಮೆ !

**ಮಿ. ಕ್ಲೆಮೆಂಟ್ಸರು ಅನ್ನುವದು:**— ಹಿಂದೂ ಸಂಗೀತಶಾಸ್ತ್ರವು ಸಂಗೀತ ಭಕ್ತನಿಗೊಂದು ಹೊಸ ಸೃಷ್ಟಿಯನ್ನು ತೋರಿಸುವದು.

**ಸ್ಟ್ರ್ಯಾಬೋ ಸಾಹೇಬರು ಅನ್ನುವದು:**— ಇಡೀ ಸಂಗೀತಶಾಸ್ತ್ರವೆಂಬುದೆಲ್ಲ ಭಾರತೀಯರ ಭಾವಸಂಪತ್ತಿಯಿಂದ ಹುಟ್ಟಿದ್ದೆಂದು ಗ್ರೀಕರ ಅಭಿಪ್ರಾಯ.

**ನೇಯುವದು**:— ಕೈಗಾರಿಕೆ, ಲಲಿತಕಲೆಗಳ ಬಗೆಗಳನ್ನು ಹೇಳಿದ್ದಾಯಿತು; ಇನ್ನು ನೂಲುವಿಕೆ ನೇಕಾರಿಕೆಯಲ್ಲಿ ಹಿಂದೂಜನರು ಎಷ್ಟು ವಿಚಕ್ಷಣರಿದ್ದರೆಂಬುವ ವಿಷಯವನ್ನು ನೋಡೋಣ! ಋಗ್ವೇದ ಕಾಲದಿಂದಲೂ ಹಿಂದೂಜನರು ನೂಲುವಿಕೆ ನೇಕಾರಿಕೆಯಲ್ಲಿ ಪ್ರಗತಿಯನ್ನು ಹೊಂದುತ್ತ ಬಂದರು; ಮತ್ತು ಮೊದಲು ಅವರು ಚೀನದ ರೇಶ್ಮೆಯನ್ನು ಬಳಿಸುತ್ತಿದ್ದರೆಂಬುವದು ಮಹಾಭಾರತ ಮುಂತಾದ ಗ್ರಂಥಗಳಿಂದ ತಿಳಿದರೂ ಮಹಾ

ಭಾರತ ಕಾಲವಾದ ನಂತರ ಹಿಂದೂಜನರು ನೂಲುವ ನೇಯುವ ಕೈಗಾರಿಕೆಯಲ್ಲಿ ಚೆನ್ನಾಗಿಯೇ ತಮ್ಮ ಬುದ್ಧಿಶಕ್ತಿಯನ್ನು ವೆಚ್ಚಮಾಡಿ ಯಾವ ದೇಶಗಳಲ್ಲಿಯೂ ಹೊರಡದಂಥ ಜಿಸುಗಾದ ನೂಲನ್ನು ನೂತು ಅಷ್ಟೇನಯವಾಗಿ ನೇಯುವದರಲ್ಲಿಯೂ ತಮ್ಮ ಕೈ ಚಳಕ ತೋರಿಸಿದ್ದರು; ತಮ್ಮ ಕೈಗಾರಿಕೆಯ ಕೈಮೆಯಿಂದ ಚೀನದ ರೇಶ್ಮೆಯನ್ನು ಮರೆಯಿಸಿ ಇಲ್ಲಿಯೇ ಗಾಳಿಯ ಪರೆಯಂಥ ಬಟ್ಟೆಗಳನ್ನು ನೆಯ್ದು ರೋಮುದವರಿಗೂ ಕೂಡ ಹುಚ್ಚುಹಿಡಿಸಿದರು; ಹಿಂದೂಗಳು ಸುಮಾರು ಕ್ರಿ. ಶ. ೭ ನೇ ಶತಮಾನದಲ್ಲಿ ಇಲಿಗಳ ಉಣ್ಣೆಯಿಂದ ಕೂಡ ಬೆಚ್ಚಗಿನ ಬಟ್ಟೆಗಳನ್ನು ನೇಯುತ್ತಿದ್ದರಂತೆ! ಇವುಗಳನ್ನು ಕೆಲವೆಡೆಯಲ್ಲಿ ಹಾವಿನಪರೆಗೂ ಹಾಲಿನ ಕೆನೆಗೂ ಹೋಲಿಸಿದ್ದಾರೆ. ಇವುಗಳಿಂದ ಹಿಂದೂಜನರ ಇಂದ್ರಿಯಪಟುತ್ವ, ಬುದ್ಧಿ ಚಾತುರ್ಯಗಳು ಸ್ಫುಟವಾಗುತ್ತವೆ.

**ಮಿ. ಜೇಮ್ಸಮಿಲ್ಲರ ಅಭಿಪ್ರಾಯ:**— ಹಿಂದೂಜನರ ನಾಜೂಕಾದ ಶರೀರದ ಕಟ್ಟಿಗೆ ಸರಿಯಾಗಿ ಹೊರಗಿನ ಸ್ಪರ್ಶ ಗ್ರಹಣ ಶಕ್ತಿಯಾದರೂ ನಾಜೂಕವೇ ಇರುವ ಮೂಲಕ ಯಾರಿಂದಲೂ ಆಗದ ಕೈಕೆಲಸಗಳು ಅವರಿಂದ ಸಾಧ್ಯವಾಗುವವು. ಅದರಂತೆಯೇ, ಕೈಗಾರಿಕೆಯಲ್ಲಾಗಲೀ ಬೆರಳುಗಳನ್ನು ಮಣಿಸುವ ಅವರ ಶಕ್ತಿಯು ಬಹು ಅತರ್ಕ್ಯವಾದುದಾಗಿದೆ.

**ಮಿ ಆರ್ಮೆಯವರು ಅನ್ನುವದು:**— ಯುರೋಪಿಯರ ಸೌಂದರ್ಯಕಿಂತಲೂ ಹಿಂದೂಹೆಂಗಸರ ಕೈಗಳು ಸೂಕ್ಷ್ಮವಿರುತ್ತವೆ ಕಸು- ರೇಶ್ಮೆಯ ಶಿಂಬೆಯನ್ನು ಹಿಂದೂಹೆಂಗಸರು ಸುಲಭವಾಗಿ ಬಿಡಿಸಿ, ಅದರೊಳಗೆ ಹಲವು ಬಗೆಯ ಭಾಗಗಳನ್ನು ಮಾಡುವರು.

**ಮಿ. ಮಿಲ್ಲರು ಬರೆಯುವದು:**— ಜಗದಲ್ಲಿ ಬೆಳೆಯುವ ಅತ್ಯುತ್ಕೃಷ್ಟ ಹತ್ತಿಯನ್ನು ಹಿಂದುಸ್ಥಾನದಲ್ಲಿ ಹುಟ್ಟಿಸಿ, ಹಿಂದೂವಿನ ಕಲೆಗಾರಿಕೆಗೆ ಒಂದು ಮೇಲಾದ ಸಾಧನವನ್ನು ಒದಗಿಸಿದ್ದರು; ಅಹಹ ? ಅಂಥ ಹತ್ತಿಯು ಈಗ ಮಾಯವಾಯಿತಲ್ಲ !

**ಮಿ. ಎಲ್‌ಫಿನ್‌ಸ್ಟನ್ ಸಾಹೇಬರು:**— "ಹಿಂದುಸ್ಥಾನದ ಹತ್ತಿಯಂಥ ಸೂಕ್ಷ್ಮ ಹಾಗೂ ಸುಂದರ ಹತ್ತಿಯು ಇನ್ನಾವ ದೇಶದಲ್ಲಿಯೂ ಕಾಣದು;"

**ಮಿ. ಮುರೇಸಾಹೇಬರು:**— "ಹಿಂದೂದೇಶದ ಅರಳೆಯ ವಸ್ತ್ರಗಳನ್ನು ಪರದೇಶದ ವರ್ತಕರು ಬಹು ಕಷ್ಟಪಟ್ಟು ಅನೇಕ ಗಂಡಾಂತರಗಳಿಗೀಡಾಗಿ ತರುತ್ತಿದ್ದರು; ಮಾನವೀ ಕಲೆಗಳಲ್ಲಿ ಇಷ್ಟು ಮನೋಹರ ಕಲೆಗಾರಿಕೆಯು ಬೇರೆಯಾವ ದೇಶಗಳಲ್ಲಿಯೂ ಗೋಚರವಾಗದು.

**ಮಿ. ಥಾರ್ನಟನ್ನ ಸಾಹೇಬರು:**— "ಹಿಂದೂದೇಶದ ಶಾಲುಗಳೆಂದರೆ, ಪಾಸಟಿಯಿಲ್ಲದ ನಾಜೂಕತನ ಹಾಗೂ ಸೌಂದರ್ಯದ ಮಾದರಿಗಳೇ !

**ಮಿ. ಬಾಟ್ಸೆಂಬುವರು ಬರೆಯುವದು:**— ಡಾಕ್ಕಾದಲ್ಲಿಯ ಹತ್ತಿಯ ಕೈಗಾರಿಕೆಗಳ ಅಗ್ಗಳಿಕೆಯನ್ನು ಹೇಳುವದು ಕಷ್ಟ ! ಔರಂಗಜೇಬನ ಮಗಳು ಒಮ್ಮೆ ಡಾಕ್ಕಾದಲ್ಲಾದ ಅರಿವೆಯ ಸೀರೆಯನ್ನುಟ್ಟುಕೊಂಡಿರಲು, ಅವಳ ಮೈಯೆಲ್ಲ ಅದರೊಳಗಿಂದ ಕಾಣಿಸುತ್ತಿರುವದಕ್ಕೆ ಮಗಳಿಗೆ ಸಿಟ್ಟುಮಾಡಿದನು. ಆಗ ಅವಳು ಒಂದರಮೇಲೊಂದು ಏಳು ಸೀರೆಗಳನ್ನು ಉಟ್ಟಿರುವೆನೆಂದು ಹೇಳಿದಳಂತೆ !

**ಡಾ ಫೋರ್ಬ್ಸ್‌ವ್ಯಾಟಸನ್ನರು ಅನ್ನುವದು:**— ನಮ್ಮಲ್ಲಿ ಎಷ್ಟು ಯಂತ್ರ ಸಾಮಗ್ರಿಯಿದ್ದರೂ ನಮ್ಮಿಂದ ಡಾಕ್ಕಾದಷ್ಟು ನಾಜೂಕ ಮತ್ತು ಸುಂದರವಾದ ವಸ್ತ್ರಗಳನ್ನು ನೇಯಲಿಕ್ಕಾಗದು.

**ಕಬ್ಬಿಣದ ಮತ್ತು ಉಕ್ಕಿನ ಕಾರಖಾನೆಗಳು:**— ಇದನ್ನು ಕುರಿತು— **ಪ್ರೊ. ವಿಲ್ಸನ್ನರು ಅನ್ನುವದು:**—ಕಬ್ಬಿಣ ಎರಕ ಹೊಯ್ಯುವದೊಂದು ಕಲೆಯಿದ್ದು ಹಿಂದೂಜನರು ಈ ಕಲೆಯಲ್ಲಿ ನಿಪುಣರು; ಇದು ಅವರಲ್ಲಿ ಬಹು ಕಾಲದಿಂದ ನಡೆದು ಬಂದುದಾಗಿದೆ.

ಯುರೋಪ ಅಮೇರಿಕೆಗಳಲ್ಲಿ ಈಗ ಆಗುವದಕ್ಕಿಂತ ಅತ್ಯುತ್ತಮವಾದ ಉಕ್ಕು ಪ್ರಾಚೀನ ಹಿಂದುಸ್ಥಾನದಲ್ಲಿ ಆಗುತ್ತಿತ್ತು; ಗ್ವಾಲ್ಹೇರ ಸಂಸ್ಥಾನದಲ್ಲಿಯ ಭಿಲ್ಸಾ ಎಂಬಲ್ಲಿ ಇತ್ತೀಚೆ ಉಕ್ಕಿನ ಎರಡು ಚೂರುಗಳು ಸಿಕ್ಕವು; ಅವುಗಳನ್ನು ಕಬ್ಬಿಣಪರೀಕ್ಷಕರಾದ ರಾಬರ್ಟ ಹಾಡ್ ಫೀಲ್ಡ ಎಂಬುವರ ಕಡೆಗೆ ಪರೀಕ್ಷಣೆಗಾಗಿ ಕಳಿಸಲು ಅವರು ಅದರ ಗುಣದ ಬಗ್ಗೆ ಬರೆಯುವದು:— ಇಷ್ಟು ಗಟ್ಟಿಯಾದ ಉಕ್ಕನ್ನು ನಾನು ಇದೀಗ ನೋಡಿದ್ದು; ಅರ್ವಾಚೀನ ಕಾಲದಲ್ಲಿ ಇಷ್ಟು ಗಟ್ಟಿ ಉಕ್ಕು ಬಹು ಅಪರೂಪ.

**ಡಾ. ಫರ್ಗ್ಯುಸನ್ನರು:—** "ದಿಲ್ಲಿಯ ಕುತುಬಮಿನಾರದ ವಿಚಾರವಾಗಿ ಬರೆಯುವದು:— ಇದು ೫ ನೇ ಶತಮಾನದ್ದೆಂದು ತಿಳಿದರೂ, ಅಷ್ಟು ಪ್ರಾಚೀನಕಾಲಕ್ಕೆ ಹಿಂದೂಜನರು ಇಷ್ಟು ದೊಡ್ಡ ಕಬ್ಬಿಣದ ಕಂಭವನ್ನು ಎರಕ ಹೊಯ್ಯುವಷ್ಟು ಜಾಣರಿದ್ದುದನ್ನು ಲಕ್ಷಿಸಿದರೆ, ಈಹೊತ್ತಿಗೂ ಯುರೋಪಿಯರಿಗೆ ಆಶ್ಚರ್ಯವೆನಿಸುತ್ತದೆ. ಕಳೆದ ೧೪ ಶತಕಗಳಿಂದಲೂ ಈ ಕಂಭವು ಒಂದೇಸಮನಾಗಿ ಮಳೆಗಾಳಿಗಳಿಗೆ ಮೈಗೊಟ್ಟು ನಿಂತಿದ್ದರೂ ಅದು ತುಕ್ಕು ಹಿಡಿದಿಲ್ಲ. ಅದರ ಮೇಲೆ ಕೊರೆದಿರುವ ಶಾಸನವು ಈಗ್ಯೂ ನಿಚ್ಚಳವಾಗಿ ಕಾಣಿಸುತ್ತದೆ. ಈ ಕಂಭವು ಶುದ್ಧ ಕಬ್ಬಿಣದ್ದೆಂಬುದರಲ್ಲಿ ಸಂದೇಹವಿಲ್ಲ.

**ಮಿಸೆಸ್ ಮ್ಯಾನಿಂಗ ಎಂಬ ಮಹಿಳೆಯು ಬರೆಯುವದು:—** ಕಚ್ಛದಲ್ಲಿ ಆಗುವ ಉಕ್ಕು ಈಗ ಗ್ಲಾಸ್ಗೋ ಶೆಫೀಲ್ಡದಲ್ಲಾಗುವ ಉಕ್ಕಿಗಿಂತಲೂ ಕಡಿಮೆ ತರದ್ದಿರಲಿಲ್ಲ. ಫಿನಿಸಿಯದವರು ಕಬ್ಬಿಣ ಮಾಡುವ ಕಲೆಯನ್ನು ಹಿಂದೂಗಳಿಂದಲೇ ಕಲಿತರು.

**ಪ್ರೊ. ವೆಬರ ಸಾಹೇಬರು:—** " ಜಿನುಗಾದ ವಸ್ತ್ರಗಳನ್ನು, ನೇಯುವದರಲ್ಲಿ ಬಣ್ಣ ಬೆರಸುವದರಲ್ಲಿ, ಲೋಹ ಧಾತುಗಳನ್ನು ಮಾಡುವದರಲ್ಲಿ, ಹರಳು ಕಲ್ಲುಗಳನ್ನು ಕೆತ್ತುವದರಲ್ಲಿ, ಗಂಧದೆಣ್ಣೆ ಮುಂತಾದ ವಾಸನೆಯ ಸಾಮಾನುಗಳನ್ನು ಸಿದ್ಧಪಡಿಸುವದರಲ್ಲಿ ಹಿಂದೂಜನರು ಜಗತ್ತಿನಲ್ಲಿಯೇ ಪ್ರಖ್ಯಾತರಿದ್ದರು. "

**ಮಿ. ಎಲ್‌ಫಿನ್‌ಸ್ಟನ್ನರು ಬಣ್ಣಗಾರಿಕೆಯ ಬಗ್ಗೆ ಬರೆಯುವದು:—** ಹಿಂದೂ ಬಣ್ಣಗಾರಿಕೆಯ ಹೊಳಪು ಮತ್ತು ಬಾಳಿಕೆ ಇವೆರಡಕ್ಕೂ ಯುರೋಪದಲ್ಲಿಯ ಬಣ್ಣಗಳು ಸರಿಗಟ್ಟಲಾರವು.

**ಡಾ. ಟೆನೆಂಟರು**—" ಜಗದಲ್ಲಿ ಎಲ್ಲಕ್ಕೂ ಮೊದಲು ಹಿಂದೂಜನರೇ ಬಳ್ಳಿಗಳಿಂದ ಬಣ್ಣತೆಗೆಯುವ ಕಲೆಯನ್ನು ಕಂಡು ಹಿಡಿದವರು. ಇದಕ್ಕೆ ನೀಲಿ, ಮದರಂಗಿ ಮುಂತಾದವು ಉದಾಹರಣೆಗಳಾಗಿವೆ. "

**ಮಿ. ಮಿಲ್ ಸಾಹೇಬರು ಅನ್ನುವದು:**—ಬಣ್ಣಹಾಕುವ ಮತ್ತು ಅಚ್ಚುಹಾಕುವ ಕಲೆಗಳು ಹಿಂದುಸ್ಥಾನದಲ್ಲಿ ಪ್ರಸಿದ್ಧ; ಅವುಗಳಿಗೆ ಬಹು ದಿನಗಳವರೆಗೆ ಬಾಳುವಂಥ ಹೊಳಪು ಇರುವದು ಬಹು ಹೆಚ್ಚಿನಮಾತಾಗಿದೆ.

**ಪ್ರೊ. ಹೀರನರು**–" ಆನೆಯ ಕೋರೆಕೊರೆದು ಅದರಿಂದ ಹಲವು ಬಗೆಯ ಸಾಮಾನುಗಳನ್ನು ಮಾಡುವದರಲ್ಲಿ ಹಿಂದೂಜನರು ಪೂರ್ಣತೆ ಯನ್ನು ಪಡೆದಿದ್ದರು.

**ಮಿ. ಸ್ಟ್ಯಾವ್ಹೋರಿನಸರು ಬರೆಯುವದು**:-- ಹಿಂದೂ ಕೈಕಸ ಬಿನವರ ಕಲೆಯು ಚಿಕ್ಕಚಿಕ್ಕ ಉಪಕರಣಗಳನ್ನೂ ಅವುಗಳಿಂದ ಅವರು ನಡಿ ಸುವ ಸೂಕ್ಷ್ಮವಾದ ಕೆಲಸವನ್ನೂ ನೋಡಿದರೆ, ಯುರೋಪಿಯರಿಗೆ ಸೋಜಿಗ ವಾಗದಿರದು.

**ಪ್ರೊ. ವಿಲ್‌ಸನ್‌ರು**--" ಕಿಟಿಕಿಗಳಿಗೆ ಕಾಜುಗಳನ್ನ ಉಪಯೋಗಿ ಸುವದು ನಾಗರಿಕತೆಯ ಕುರುಹು; ಇದು ಹಿಂದೂಗಳಂತೆ ಗ್ರೀಕರೋಮನ ರಲ್ಲಿ ಕಂಡು ಬರಲಿಲ್ಲ.

**ಮಿ. ಪ್ಲಿನಿಯ ಅಭಿಪ್ರಾಯ**:– ಹಿಂದುಸ್ಥಾನದಲ್ಲಿಯೇ ಎಲ್ಲಕ್ಕೂ ಮೊದಲು ಅತ್ಯುತ್ತಮವಾದ ಗಾಜು ಹುಟ್ಟಿತು.

**ಲಾರ್ಡ ಡಫರಿನ್ನರು ಅನ್ನುವದು**:-- ಉಡುಗೆತೊಡಿಗೆಯ ವಿಷ ಯದಲ್ಲಿ ಯುರೋಪಿಯರಿನ್ನೂ ಹಿಂದೂಜನರಿಂದ ಬೇಕಾದಷ್ಟು ಕಲಿಯ ಬೇಕಾಗಿದೆ.

**ಡಾ. ರಾಯಲ್**– "ಒಂದರ ತರುವಾಯ ಒಂದು ಪೈರನ್ನು ಬಿತ್ತುವ ಪದ್ಧತಿಯು ಹಿಂದುಸ್ಥಾನದಿಂದಲೇ ಬೇರೆ ದೇಶದವರಿಗೆ ಗೊತ್ತಾ ಯಿತು. ಭೂಮಿಯ ಉತ್ಪಾದಕಶಕ್ತಿಯನ್ನು ಹೇಗೆ ಕಾಯಬೇಕೆಂಬುದು ಹಿಂದೂ ಒಕ್ಕಲಿಗನಿಗೆ ಪೂರಾ ಗೊತ್ತುಂಟು.

**ಚೇಂಬರ ಎನ್‌ಸೈಕ್ಲೋಪೀಡಿಯಾದಲ್ಲಿ ಬರೆಯಲ್ಪಟ್ಟದ್ದು**:— ರೋಮರಾಜ್ಯದಲ್ಲಿಯ ಕಚೇರಿಗಳೆಲ್ಲವೂ ಹಿಂದುಸ್ಥಾನದಲ್ಲಿ ಹುಟ್ಟಿದ ಬೆಳ್ಳಿ– ಭಂಗಾರಗಳ ತಗಡಿನಿಂದಲೇ ಹೊಳೆಯುತ್ತಿದ್ದವು.

ಬೇರೆಬೇರೆ ಆಕಾರದ ಕತ್ತಿಗಳು, ಕೈಗಾರಿಕೆಯ ಸಿರಿವಂತಿಕೆಯಿಂದ ಹೊಳೆಯುವ ಜಮಖಾನೆಗಳು, ಹಲವುಬಗೆಯ ಗಿಲಾಯಿಸಾಮಾನುಗಳು ಇವೆಲ್ಲವು ಹಿಂದೂಜನರ ಗುಪ್ತಕೈಗಾರಿಕೆಯ ಅಗ್ಗಳಿಕೆ–ಹೆಗ್ಗಳಿಕೆಗಳನ್ನೇ ತೋರ್ಪಡಿಸುತ್ತವೆ.

**ಡಾ. ವ್ಯಾನ್‌ಸಾಹೇಬರಿಗೆ** ಭಿಲಸಾದ ಹತ್ತರ ಪ್ರಾಚೀನ ಕಾಲದ ಗಚ್ಚಿನ

ಒರಳೊಂದು ದೊರೆಯಿತು; ಇದನ್ನು ಮಾಡುವದರಲ್ಲಿ ಪೂರ್ವಿಕರು ಮಳಲು ಹಾಗೂ ಗಚ್ಚನ್ನು ಉಪಯೋಗಿಸಿದ್ದರೆಂಬುವದು ಅವರಿಗೆ ಕಂಡುಬಂತು.

---

# ೧೫ ನೆಯ ಪ್ರಕರಣ

---

## ವಾಙ್ಮಯ ಸಂಪತ್ತಿ.

**ಸಂಸ್ಕೃತ ವಾಙ್ಮಯದ ಪೂರ್ಣ ಪರಿಚಯ ಮಾಡಿಕೊಳ್ಳಲು ಒಂದು ಮನುಷ್ಯಜನ್ಮ ಸಾಲದು.**

— **ಸರ್. ಡಬ್ಲ್ಯು ಜೋನ್ಸ**

ಯಾವುದೊಂದು ಜನಾಂಗದ ಮೇಲ್ಮೆಯನ್ನಳೆಯಲು ವಾಙ್ಮಯಕ್ಕಿಂತ ನಿಶ್ಚಿತವಾದ ಒರೆಗಲ್ಲು ಸಿಗದು. ವಾಙ್ಮಯದೊಳಗೆ ಜನಾಂಗದ ಬುದ್ಧಿವಂತಿಕೆಯು ಮೂರ್ತಿಭವಿಸಿರುವದಲ್ಲದೆ, ಅದರ ಜೀವಾಳವೂ ವಾಙ್ಮಯದಲ್ಲಿಯೇ ನೆಲೆಗೊಂಡಿರುತ್ತದೆ. ಜನಾಂಗದ ಬುದ್ಧಿ ವೈಭವ, ನಾಗರಿಕತೆ, ವಿಚಾರ—ಆಚಾರಗಳ ಬರಹದಲ್ಲಿರುವ ಸಾಕ್ಷಿಯೆಂದರೆ, ವಾಙ್ಮಯವೇ; ಆದುದರಿಂದ ಇದೀಗ ಜನಾಂಗದ ಸ್ಥಿತಿಯನ್ನು ತೋರಿಸುವ ಬರಹಗನ್ನಡಿ.

**ಮಿ. ಡಬ್ಲ್ಯು. ಸಿ. ಟೇಲರ** ಎಂಬುವರು ಸಂಸ್ಕೃತ ವಾಙ್ಮಯ ವಿಷಯವಾಗಿ ಬರೆಯುವದು—ಯುರೋಪದೊಳಗಿರುವ ಭಾಷೆಗಳಿಗೆಲ್ಲ ಸಂಸ್ಕೃತವೇ ತಾಯಿಬೇರು; ಗ್ರೀಕಭಾಷೆಯಲ್ಲಿಯ ಮಾರ್ದವಕ್ಕೂ, ರೋಮನ್ನರ ಭಾಷೆಯಲ್ಲಿಯ ಬಿಗುವಿಗೂ ಇದೇ ಮುಖ್ಯ ಸೆಲೆ. ಸಂಸ್ಕೃತ ಭಾಷೆಯ ಅಪಾರ ಸಂಪತ್ತಿ, ಮತ್ತು ವೈವಿಧ್ಯವನ್ನು ಕಂಡರೆ ಮನಸು ದಂಗಾಗುವದು. ಈ ವಾಙ್ಮಯದಲ್ಲಿ ಪ್ರಭುತ್ವ ಪಡೆಯಬೇಕೆಂದರೆ, ಇಡೀ ಒಂದು ಜನ್ಮದ ಕಾರ್ಯವೇ ಸೈ.

**ಪ್ರೊ. ಹೀರನರು ಅನ್ನುವದು:—** ಸಂಸ್ಕೃತ ವಾಙ್ಮಯವು ನಿಃಸಂಶಯವಾಗಿ ಸುಧಾರಿಸಿದವರ ಭಾಷೆಯು; ಗದ್ಯಪದ್ಯಗಳಲ್ಲಿ ಸಂಸ್ಕೃತ ವಾಙ್ಮಯ ಸಂಪತ್ತಿಯು ಅಪಾರವಾಗಿದೆ.

**ಪ್ರೊ. ಮ್ಯಾಕ್ಸಮುಲ್ಲರರು ಅನ್ನುವದು**:—ಕೈಬರಹದಲ್ಲಿ ಅಡಕವಾಗಿರುವ ಸಂಸ್ಕೃತ ಗ್ರಂಥಗಳು ಇನ್ನೂ ಸಾವಿರಾರು ಇರಬಹುದು; ಗ್ರೀಸ ಹಾಗೂ ರೋಮದ ವಾಙ್ಮಯ ಭಂಡಾರವನ್ನು ಒಟ್ಟುಗೂಡಿಸಿ ಹೋಲಿಸಿದರೆ, ಸಂಸ್ಕೃತ ಭಂಡಾರಕ್ಕೆ ಪಾಸಟಿಯಾಗದು.

**ಕೆ. ವಾರ್ಡರು ಅನ್ನುವದು**:—ಆರ್ಯರ ವಾಙ್ಮಯವನ್ನೋದಿದರೆ ಅವರು ಒಂದೂ ಶಾಸ್ತ್ರವನ್ನು ಬಿಟ್ಟಂತೆ ಕಾಣುವದಿಲ್ಲ. ಅವರು ಬಗೆಬಗೆಯ ಶಾಸ್ತ್ರಗಳನ್ನು ಕುರಿತು ಬರೆದಿರುವ ಪುಸ್ತಕಗಳನ್ನೋದಿದರೆ, ಪ್ರತಿಯೊಂದು ಶಾಸ್ತ್ರವನ್ನು ಅವರು ಎಷ್ಟರಮಟ್ಟಿಗೆ ಬೆಳಿಸಿದ್ದರೆಂಬುದು ಸ್ಫುಟವಾಗುತ್ತದೆ; ಮೇಲಾಗಿ ಅವರು ಮಾಡಿದ ಆಯಾ ವಿಷಯಗಳ ಸಾಂಗೋಪಾಂಗ ವಿವೇಚನೆಯನ್ನು ಓದಿದರೂ ಪ್ರಾಚೀನರಾದ ಯಾವ ಜನರಿಗೂ ಅವರು ಮೇಲಾಗಿರುವರೆಂದೇ ಸಿದ್ಧವಾಗುತ್ತದೆ. ಅವರ ತತ್ವಶಾಸ್ತ್ರ ಮತ್ತು ಧರ್ಮಶಾಸ್ತ್ರದ ಗ್ರಂಥಗಳನ್ನು ಓದಿದಂತೆಲ್ಲ ಅವರ ಅಗಾಧ ಪಾಂಡಿತ್ಯವು ಹೆಚ್ಚೆಚ್ಚು ಮನದಟ್ಟಾಗುವದು.

**ಮಿಸೆಸ್. ಮ್ಯಾನಿಂಗ**— ಹಿಂದೂಜನರ ಬುದ್ಧಿವೈಶಾಲ್ಯವು ಅತರ್ಕ್ಯವಿದೆ; ಅತ್ಯಂತ ಉಚ್ಚತರಗತಿಯ ಅವರ ಬುದ್ಧಿಯ ಹಾಗೂ ಭಾವನೆಯ ಶಕ್ತಿಗಳನ್ನು ನೆನೆದುಕೊಂಡರೆ ಅವರಲ್ಲದೆ ಇನ್ನಾರು ಅಂಥ ವಾಙ್ಮಯವನ್ನು ಹುಟ್ಟಿಸಲು ಯೋಗ್ಯರೆಂಬುದು ತಾನೇ ಕಂಡುಬರುತ್ತದೆ. ಪೂರ್ಣವೂ, ಸಮೃದ್ಧವೂ, ಮಧುರವೂ ಆದ ಸಂಸ್ಕೃತಭಾಷೆಯ ಸಾಹಿತ್ಯವನ್ನು ದೇವರಿಂದಲೇ ಪಡಕೊಂಡು ಬಂದವರಿಂದ ಮೇಲ್ತರಗತಿಯ ವಾಙ್ಮಯವು ಹುಟ್ಟದಿದ್ದೀತೇ? ಮತ್ತು ಆ ವಾಙ್ಮಯವಾದರೂ ಎಂಥದು? ಜಗತ್ತಿನಲ್ಲಿಯ ಎಲ್ಲ ಭಾಷೆಗಳಿಗಿಂತ ಸವಿಕಟ್ಟು ಮತ್ತು ಫಲವತ್ತಾದದ್ದು! ಅಂದಮೇಲೆ ಕೇಳುವದೇನು?

**ಸಂಸ್ಕೃತಭಾಷೆ**— ವಾಙ್ಮಯ ವಿಷಯವಾಯಿತು; ಇನ್ನು ಭಾಷೆಯ ಮಾತು. **ಸರ್ ಡಬ್ಲ್ಯು ಜೋನ್ಸರು**-— ಸಂಸ್ಕೃತ ಭಾಷೆಯನ್ನು ಅತ್ಯಂತ ಸೂಕ್ಷ್ಮದೃಷ್ಟಿಯಿಂದ ಅಭ್ಯಾಸಮಾಡಿದ ಯುರೋಪಿಯರಲ್ಲಿ ಇವರು ಶ್ರೇಷ್ಠರು. ಇಂಥವರು ಅನ್ನುವದು:— ಗ್ರೀಕ ಭಾಷೆಗಿಂತಲೂ ಸಂಸ್ಕೃತವು ಹೆಚ್ಚು ಪೂರ್ಣವಿದ್ದು ಅದರ ರಚನೆಯೇನೋ ಬಹು ಚಮತ್ಕಾರವೇ ಸರಿ.

ಶಬ್ದಸಂಪತ್ತಿಯಲ್ಲಿ ಅದು ಗ್ರೀಕ ಲ್ಯಾಟಿನ್ ಭಾಷೆಗೆ ಮೀರಿದ್ದು; ಅವೆರಡೂ ಪ್ರಾಚೀನ ಭಾಷೆಗಳಿಗೆ ಹೋಲಿಸಲಿಕ್ಕೆ ಬಾರದಷ್ಟು ಸುಂದರವಾಗಿದೆ.

ಜರ್ಮನಿಯ ಸುಪ್ರಸಿದ್ಧ ಟೀಕಾಕಾರನಾದ ಸ್ಲೆಜೆಲ್ಲಸು ಅನ್ನುವದು:— ಸಂಸ್ಕೃತಕ್ಕೆ ಪೂರ್ಣಭಾಷೆ ಎಂದು ಹೆಸರು ಬಂದುದು ಸಾರ್ಥಕವಾಗಿದೆ. ರಚನೆ ಹಾಗೂ ವ್ಯಾಕರಣಗಳಲ್ಲಿ ಅದು ಗ್ರೀಕ ಭಾಷೆಗೆ ಹೊಂದಿಕೆಯಾಗಿದ್ದರೂ, ಸಾದಾತನದಲ್ಲಿ ಎಲ್ಲವುಗಳನ್ನು ಮಿಕ್ಕಿದೆ. ಗ್ರೀಕಭಾಷೆಯಲ್ಲಿರುವ ಸೌಂದರ್ಯ, ಲಾಟಿನ್ ಭಾಷೆಯಲ್ಲಿರುವ ಸೂತ್ರತ್ವ ಹಾಗೂ ಯಥಾರ್ಥತ್ವಗಳು ಇದರಲ್ಲಿ ಪೂರ್ಣವಾಗಿವೆ. ಜರ್ಮನಿಯರ ಹಾಗೂ ಇರಾಣಿಯರ ಶಬ್ದಧಾತುಗಳಿಗೆ ಇದು ಸಂಬಂಧಪಟ್ಟಿದ್ದರೂ, ಬಾಯಿಯಲ್ಲಿ ಆ ಭಾಷೆಗಳಷ್ಟೇ ಉತ್ಸಾಹಪರವೂ ವೀರ್ಯವತ್ತರವೂ ಆಗಿದೆ.

**ಮಿ. ಪಾಕಾಕ್‌ರು:**— "ಗ್ರೀಕಭಾಷೆಯು ಸಂಸ್ಕೃತದಿಂದಲೇ ಹುಟ್ಟಿದೆ. **ಡಾ. ಪ್ರಿಚರ್ಡರು**:— "ಗ್ರೀಕರ ಧರ್ಮವು ಪೌರ್ವಾತ್ಯರಿಂದಲೇ ಉತ್ಪನ್ನವಾಯಿತೆಂಬುವ ಮಾತನ್ನು ಯಾರೂ ಅಲ್ಲಗಳೆಯಲಾರರು. ಗ್ರೀಕರ ಭಾಷೆ–ಧರ್ಮ ಅವೆರಡೂ ಪೌರ್ವಾತ್ಯರವು ಆಗಿವೆ."

ಪಶ್ಚಿಮ ಏಸಿಯಾದ ಮೂಲಾಕ್ಷರಗಳಿಗೆಲ್ಲ ಸಂಸ್ಕೃತವೇ ಮೂಲ. ಸಂಸ್ಕೃತವು ಆರ್ಯ (ಇಂಡೋಯುರೋಪಿಯಾ) ಭಾಷೆಗಳಿಗೆಲ್ಲ ತಾಯಿಬೇರು. ಎಂದು ಡಾ. ಬ್ಯಾಲಂಟಾಯನರು ಆಧಾರ ಸಹಿತವಾಗಿ ಸಮರ್ಥನ ಮಾಡಿದ್ದಾರೆ.

**ಮಿ. ಬಾಪ್:**—"ಒಂದಾನೊಂದು ಕಾಲಕ್ಕೆ ಜಗತ್ತಿನಲ್ಲೆಲ್ಲ ಸಂಸ್ಕೃತ ಭಾಷೆಯೊಂದೇ ಬಳಕೆಯಲ್ಲಿತ್ತು. ಅದು ಗ್ರೀಕ–ರೋಮ ಭಾಷೆಗಳಿಗಿಂತ ಸ್ಪಷ್ಟವೂ ಸುಂದರವೂ ಆಗಿದೆ."

**ಬರಹ ಕಲೆ.** ಜಗತ್ತಿನಲ್ಲಿ ಬರಹಕಲೆಯನ್ನು ಎಲ್ಲಕ್ಕೂ ಮೊದಲು ಬಳಕೆಯಲ್ಲಿ ತಂದವರು ಆರ್ಯರೇ; ಈಬಗ್ಗೆ ಬೇರೆ ಬೇರೆ ಜನಾಂಗದ ಪಂಡಿತರ ಮತವೇನಿರುವದೆಂಬುದನ್ನೀಗ ಕ್ರೋಡೀಕರಿಸಿ ಹೇಳಬೇಕಾಗಿದೆ.

**ಮಿ. ವೆಬರಸಾಹೇಬರು**:— "ಅತ್ಯಂತ ಪ್ರಾಚೀನ ಕಾಲದ ಬರಹಗಳೆಂದರೆ ಹಿಂದೂಜನರ ವಾಙ್ಮಯಿಕ ಆಸ್ತಿಗಳೇ ಸೈ."

**ಪ್ರೊ. ಹೀರೆನರು**— ಬಹು ಬುನಾದಿಯಿಂದಲೂ ಮೂಲಾಕ್ಷರಗಳ

ಬರೆವಣಿಗೆಯು ಆರ್ಯರಿಗೆ ಗೊತ್ತಿತ್ತೆಂಬುದು ಈಗ ಸಿದ್ಧವಾಗಿದೆ; ಮತ್ತು ಆಗ ಅದನ್ನವರು ವ್ಯವಹಾರದಲ್ಲಿ ಕೂಡ ಉಪಯೋಗಿಸುತ್ತಿದ್ದರು.

ಜಗತ್ತಿನಲ್ಲಿಯ ಬೇರೆ ಜನಾಂಗಗಳು ಬರವಣಿಗೆಯ ಕಲೆಯನ್ನರಿಯುವ ಮೊದಲೇ ಆರ್ಯರು ತಮ್ಮದೊಂದು ಬರಹವನ್ನು ಮಾಡಿಕೊಂಡಿದ್ದರು; ಕ್ರಿ. ಶ. ಮುಂಚೆ ೮೦೦ ವರ್ಷಗಳಾಚೆ ವೇದಗಳನ್ನು ಆರ್ಯರು ಬರೆವಣಿಗೆಯಲ್ಲಿ ತಂದಿರಬಹುದೆಂದು ಪ್ರೊ. ಮ್ಯಾಕ್ಸಮುಲ್ಲರು ಊಹಿಸುವದುಂಟು; ಆದರೆ ಆಕ್ಸಫರ್ಡಬೋಲಿಯಲ್ ಕಾಲೇಜದ ಓರಿಯಂಟಲ್ ಲೆಕ್ಚರರಾದ ಮಿ. ವರ್ಮಾ ಎಂಬುವರು ವೇದಕಾಲದಿಂದಲೇ ಬರಹವು ಆರ್ಯರ ಬಳಿಕೆಯಲ್ಲಿತ್ತೆಂಬುದನ್ನು ಸಿದ್ಧಮಾಡಿದ್ದಾರೆ. ಆರ್ಯರಲ್ಲಿ ಬರೆವಣಿಗೆಯು ಇತ್ತೆಂಬುದಕ್ಕೆ ಕಾತ್ಯಾಯನ, ನಾರದ, ಯಾಜ್ಞವಲ್ಕ್ಯರಿವರೇ ಸಾಕ್ಷಿಯಾಗಿದ್ದಾರೆ.

**ವೈದಿಕ – ವಾಙ್ಮಯ:**— ಮಾನವೀ ದೃಷ್ಟಿಯಿಂದ ವೈದಿಕ ವಾಙ್ಮಯಕ್ಕೆ ಸರಿಗಟ್ಟುವಂಥ ಯಾವ ವಾಙ್ಮಯವೂ ಇಲ್ಲ. ವೈದಿಕ ವಾಙ್ಮಯದಲ್ಲಿ ವೇದ, ಬ್ರಾಹ್ಮಣ, ಸೂತ್ರಗಳೆಂದು ಭಾಗಗಳುಂಟು. ವೇದಗಳು ಮನುಷ್ಯನ ಶಾರೀರಿಕ, ಮಾನಸಿಕ, ಹಾಗೂ ಆಧ್ಯಾತ್ಮಿಕ ವಿಷಯಗಳ ಚರ್ಚೆಮಾಡುವದಲ್ಲದೆ, ಮೇಲಿನ ವಿಷಯಗಳಿಗೂ ಜ್ಞಾನಕ್ಕೂ ಹೇಗೆ ಸಂಬಂಧ ಕೂಡಿಸಬೇಕೆಂಬುದನ್ನೂ ತಿಳಿಸುತ್ತವೆ. ವಾಲ್ಟೇರನಿಗೆ ಯಜುರ್ವೇದವನ್ನು ಕಾಣಿಕೆಯೆಂದು ಕೊಟ್ಟಾಗ ಆ ಅಮೂಲ್ಯ ಕಾಣಿಕೆಗಾಗಿ ಅವನು ಧನ್ಯವಾದಗಳನ್ನರ್ಪಿಸಿದನಂತೆ.

**ಪ್ರೊ. ಮ್ಯಾಕ್ಸಮುಲ್ಲರು:**— "ಪ್ರಾಚೀನರ ಇತಿಹಾಸ, ಬುದ್ಧಿ–ವಿಕಾಸ ಮುಂತಾದವುಗಳನ್ನು ಚನ್ನಾಗಿ ತಿಳಿಯಬೇಕೆಂದರೆ, ನಾವು ವೈದಿಕವಾಙ್ಮಯವನ್ನು ಅಭ್ಯಾಸಮಾಡದೆ ಗತಿಯಿಲ್ಲ. ಮನುಷ್ಯಜಾತಿಯ ಅತ್ಯಂತ ಪ್ರಾಚೀನ ಗ್ರಂಥ–ಭಂಡಾರವೆಂದರೆ ವೇದಗಳೇ ಸೈ."

**ಪ್ರೊ. ಹೀರನರು:**— ಪ್ರಾಚೀನತೆಯಲ್ಲಿಯೂ, ವೈಭವದಲ್ಲಿಯೂ, ಸಂಪತ್ತಿಯಲ್ಲಿಯೂ ತಮ್ಮದಾದ ವೇದದ ಬಗ್ಗೆ ಹಿಂದೂಜನರಿಗೆ ಅಭಿಮಾನ ಪಡುವ ಭಾಗ್ಯವಿರುವಂತೆ ಇನ್ನಾವ ಜನಾಂಗದವರಿಗೂ ಇಲ್ಲ. ಮಾನವ ಜಾತಿಯ ಮುನ್ನಡೆಯಾಗಬೇಕೆಂದು ಅಖಂಡವಾಗಿ ಬೆಳಗುತ್ತಿರುವ ತನ್ನ

ದೈವಿಕ ಜ್ಯೋತಿಯಿಂದ ವೇದಗಳು ಅನಂತ ಕಾಲದಿಂದ ನಿಂತುಕೊಂಡಿವೆ.

ವೇದಗಳಲ್ಲಿ ಎಲ್ಲ ಶಾಸ್ತ್ರಗಳ ಬೀಜಗಳು ಅಡಕವಾಗಿವೆಯೆಂದು ಹಿಂದೂಜನರ ತಿಳುವಳಿಕೆ.

ಲಾಹೋರದ ಕೈ. ಗುರುದತ್ತರು ಋಗ್ವೇದದೊಳಗಿನ

**मित्रं हुवे पूतं दक्षं वरुणं च रिशादसं ।**
**धियं घृताचिं साधन्ता॥**

ಮೇಲಿನ ಋಚೆಯ ಅರ್ಥವನ್ನು ಕೆಳಗಿನಂತೆ ಮಾಡಿದ್ದಾರೆ. "ಘೃತಾಚಿ, ಹಾಗೂ ಸಾಧಂತಾ ಇವುಗಳ ಮಿಶ್ರಣದಿಂದ ನೀರು ಆಗ ಬಹುದು; ವರುಣವೆಂದರೆ ಆಕ್ಸಿಜನ್ ವಾಯುವೆಂತಲೂ ಮಿತ್ರವೆಂದರೆ ಹಾಯಡ್ರೊಜನ್ನವೆಂತಲೂ, ದಕ್ಷವೆಂದರೆ, ಶಕ್ತಿಯೆಂತಲೂ ಮಾಡಿದ್ದಾರೆ.

**ಪ್ರೊ. ವಿಲ್ಸನ್ನರು**:— ವರ್ಗಭಾಗಗಳನ್ನು ಕಲ್ಪಿಸಲಿಕ್ಕೆ ಗ್ರೀಕರಿಗೆ ಬಹುಕಾಲ ಬೇಡಾಯಿತು. ಪ್ಲೇಟೋನಿಗೆ ನಾಮ, ಕ್ರಿಯಾಪದ ಇವೆರಡೂ ಗೊತ್ತಿದ್ದವು; ಅರಿಸ್ಟಾಟಲ್ಲನು ಅಲಂಕಾರ ಶಾಸ್ತ್ರವನ್ನು ಚರ್ಚಿಸುವಾಗ ಮಾತ್ರ ಸಮುಚ್ಚಾಯಕ ಅವ್ಯಯವನ್ನು ಉಪಯೋಗಿಸಿದ್ದಾನೆ; ಆದರೆ ಶುಕ್ಲ ಯಜುರ್ವೇದದ ಪ್ರಾತಿಶಾಖ್ಯದಲ್ಲಿ ಉಪಸರ್ಗಾವ್ಯಯ, ಸರ್ವನಾಮ ಮುಂತಾದವುಗಳು ಸಾಕಷ್ಟು ಉಪಯೋಗಿಸಲ್ಪಟ್ಟಿವೆ.

**ಮಿ. ಅಲೆಕ್ಸಾಂಡರ ಥಾಮಸನ್ನರು**:— "ಹಿಂದುಸ್ಥಾನದೊಳಗೆ ಆಗಿಹೋದ ಭಾಷಾಶಾಸ್ತ್ರಜ್ಞರು ಅನ್ನುವದು— ಸಂಸ್ಕೃತದೊಳಗಿನ ವ್ಯಂಜನ ವರ್ಣಗಳ ವಿಭಾಗ ಮಾಡಿರುವ ಬಹು ಸೋಜಿಗದ ಬಗೆಯನ್ನು ಕುರಿತು ಯೋಚಿಸಿದರೆ, ಆರ್ಯರ ಬುದ್ಧಿಶಕ್ತಿಯು ಎಷ್ಟೊಂದು ವಿಲಕ್ಷಣವಾಗಿ ತ್ತೆಂಬುದರ ಕಲ್ಪನೆಯಾಗುವದು. ಈ ವಿಷಯದಲ್ಲಿ ಯುರೋಪಿಯರು ಕೂಡ ಆರ್ಯರಿಗೆ ಹಿಂದೆ ಇರುವರು."

**ರೆವ್ಹ. ವಾರ್ಡ**:— "ಭಾಷಾಶಾಸ್ತ್ರದೊಳಗೆ ಪ್ರಾಚೀನ ಹಿಂದೂ ಜನರು ಗ್ರೀಕ, ರೋಮ ಹಾಗೂ ಆಧುನಿಕರನ್ನು ಹಿಂದೆ ಹಾಕಿರುವರು."

**ಪ್ರೊ. ಮ್ಯಾಕ್ಸಮುಲ್ಲರು**:—"ಇಡೀ ಭಾಷಾ ವಿಸ್ತರವನ್ನೇ ಕೆಲವು ಶಾಬ್ದಿಕ ಧಾತುಗಳಲ್ಲಿ ಅಡಕಗೊಳಿಸುವ ವಿಚಾರವು ೧೬ ನೇಶತಮಾನಕ್ಕೆ ಮುಂಚೆ ಆರ್ಯರ ಹೊರತಾಗಿ ಇನ್ನಾರಿಗೂ ಗೊತ್ತಿರಲಿಲ್ಲ; ಆದರೆ ಅದನ್ನು

ಬ್ರಾಹ್ಮಣರು ಕ್ರಿ. ಶ. ಮುಂಚೆ ೫೦೦ ವರ್ಷಗಳಾಚೆಯೇ ಪ್ರಚಾರದಲ್ಲಿ ತಂದಿದ್ದರು."

ವ್ಯಾಕರಣದೊಳಗಂತೂ ಸಂಸ್ಕೃತವು ಯಾವ ಭಾಷೆಗೂ ಸರಿ ಹತ್ತುವಂತಿಲ್ಲ. ಮನುಷ್ಯಬುದ್ಧಿಗೆ ನಿಲುಕಲು ಸಾಧ್ಯವಿರುವದೆಲ್ಲವನ್ನೂ ಪಾಣಿನೀ ಮುನಿಯು ತನ್ನ ವ್ಯಾಕರಣದೊಳಗೆ ಕೊನೆಗಾಣಿಸಿದ್ದಾನೆ.

**ಪ್ರೊ. ವೆಬರರು:—** ಪಾಣಿನಿಯಂಥ ವಾಕ್-ಶಿಲ್ಪಿಗನು ಕಟ್ಟಿದ ವ್ಯಾಕರಣದಂಥ ಭವ್ಯ ಕಟ್ಟಡದೊಳಗೆ ಕಾಲಿಟ್ಟರೆ, ಆಶ್ಚರ್ಯದಿಂದ ಯಾರ ದಾದರೂ ದಿಕ್ಕು ತಪ್ಪುವದುಂಟು; ಭಾಷಾದೃಶ್ಯವನ್ನು ಅಂದಗೊಳಿಸುವ ಆ ಶೋಧಕನ ಬುದ್ಧಿವಂತಿಕೆ, ಭಾಷಾವಿಷಯದಲ್ಲಿ ಆಳವಾಗಿ ಸೇರುವ ಅವರ ಅಗಾಧ ಪಾಂಡಿತ್ಯ, ಇವೆರಡನ್ನೂ ನೋಡಿ, ಎಂತೆಂಥವನೂ ಬೊಟ್ಟು ಕಚ್ಚಿಕೊಳ್ಳದಿರಲಾರನು.

ವ್ಯಾಕರಣಶಾಸ್ತ್ರದೊಳಗೆ ಪಾಣಿನಿ, ಕಾತ್ಯಾಯನ, ಪಾತಂಜಲಿ, ಈ ಮೂವರು ಮೀರಿದ ಬುದ್ಧಿವಂತರು. ವಾರ್ತಿಕಗಳ ಕರ್ತೃಗಳಾದ ಕಾತ್ಯಾಯನರು ಪಾಣಿನಿಯ ವ್ಯಾಕರಣಕ್ಕೆ ಟೀಕೆ ಬರೆದರು; ಅದಕ್ಕೆ ಪಾತಂಜಲಿಯವರು ಮಹಾ ಭಾಷ್ಯ ಬರೆದರು.

**ರೆವ್ಹ-ವಾರ್ಡ:—**" ಆರ್ಯರ ಕೋಶಗಳು ಸಹ ಅವರ ಬುದ್ಧಿಗೆ ತಕ್ಕಂತೆ ಸೋಜಿಗಗೊಳಿಸುವಂಥವು ಅವೆ; ಇಷ್ಟೇ ಅಲ್ಲದೆ ಅವುಗಳನ್ನೋದಿದರೆ, ಅವರ ಭಾಷೆಯು ಮೇಣದಂತಿದ್ದು, ಸ್ವಲ್ಪದರಲ್ಲಿ ಬೇಕಾದಷ್ಟು ಅರ್ಥವನ್ನು ವ್ಯಕ್ತಗೊಳಿಸುವಷ್ಟು ಅದರ ಶಕ್ತಿಯಿದ್ದಿತೆಂಬುದೂ ತಿಳಿಯುವದು.

**ಕಾವ್ಯ:—** ಕಾವ್ಯವು ಹಿಂದೂಗಳನ್ನಾಳುವ ಅಧಿದೇವತೆ. ಕಾವ್ಯವು ವ್ಯಕ್ತಗೊಳಿಸಲು ಬಾರದ ಗಣಿತ, ಜೋತಿಷ್ಯ, ಮುಂತಾದ ಶಾಸ್ತ್ರಗಳನ್ನಲ್ಲದೆ ಧರ್ಮವನ್ನು ಕೂಡ ತನ್ನ ಸೊಂಪಿನಿಂಲೂ, ಬಣ್ಣಗಾರಿಕೆಯಿಂದಲೂ ಮಾರ್ಪಡಿಸಿದೆ.

**ಪ್ರೊ. ಮ್ಯಾಕ್ಸಡಂಕರ:—** " ಹಿಂದುಸ್ಥಾನದೊಳಗಿನ ಸಂಸ್ಕೃತ ಕಾವ್ಯಭಂಡಾರಕ್ಕೆ ಎಣೆಯಿಲ್ಲ.

**ಪ್ರೊ. ಹೀರನರು:—**" ವರ್ಣ್ಯ, ನಾಟ್ಯ, ವ್ಯಂಗ್ಯ, ಸಂವಾದ, ರೂಪಕ ಮುಂತಾದ ಬಗೆಯ ಕಾವ್ಯಗಳೆಲ್ಲವೂ ಸಂಸ್ಕೃತದೊಳಗೆ ಹೊರಚಲ್ಲಿ ಹರಿದವು;

ಅವುಗಳಿಗೆ ಪಾರವೇ ಇಲ್ಲ."
ರಾಮಾಯಣ, ಮಹಾಭಾರತ ಮಹಾಕಾವ್ಯಗಳು ಈಹೊತ್ತು ಜಗತ್ತಿಗೆ ಮೀರಿ ಬೆಳಗುತ್ತಿವೆ.

**ಪ್ರೊ. ಮೋನಿಯರ ವಿಲಿಯಮ್ಸ:**—"ಗ್ರೀಕರಂತೆ ಹಿಂದೂಗಳಿಗೆ ಎರಡೇ ಕಾವ್ಯಗಳಿದ್ದರೂ, ಅವುಗಳನ್ನು ಇಲಿಯಡ್, ಆಡೇಸಿ ಕಾವ್ಯಗಳೊಡನೆ ಹೋಲಿಸುವದೆಂದರೆ ಹೊಳೆಗಳನ್ನು ಹಳ್ಳಗಳಿಗೆ ಸರಿಹಚ್ಚುವಂತಿದೆ. ಜಗತ್ತಿನಲ್ಲಿಯೇ ಮಿಗಿಲಾಗಿ ನಿಂತಿರುವ ಹಿಮಾಲಯದ ಉಚ್ಚ ಶಿಖರದಿಂದ ಹುಟ್ಟಿ ಅನೇಕ ಚಿಕ್ಕ ಚಿಕ್ಕ ಹೊಳೆ ಹಳ್ಳಗಳಿಂದ ಬೆಳೆದ ಆ ದಿವ್ಯ ಸಿಂಧು, ಗಂಗಾ ನದಿಗಳೆಲ್ಲಿ? ಗ್ರೀಸದೊಳಗಿನ ಕಾವ್ಯರೂಪವಾದ ಈ ಹಳ್ಳಗಳೆಲ್ಲಿ?"

ಮಹಾಭಾರತ ರಾಮಾಯಣಗಳಿಗೂ ಇಲಿಯಡ್ ಆಡೆಸಿಗಳಿಗೆ ಸರಿಹಚ್ಚಿದರೆ, ಆನೆಗೂ ಆಡಿಗೂ ಹೋಲಿಸಿದಂತಾಗುವದು. ಮಹಾಭಾರತದಲ್ಲಿ ೨೨೦೦೧೦ ಸಾಲುಗಳಿವೆ; ರಾಮಾಯಣದಲ್ಲಿ ೪೮೦೦೦; ಆದರೆ ಇಲಿಯಡ್‌ದಲ್ಲಿ ೧೫೬೯೩, ಆಡೆಸಿಯಲ್ಲಿ ೯೯೬೮ ಸಾಲುಗಳಿವೆ.

**ಸರ ಡಬ್ಲ್ಯು ಜೋನ್ಸರು:**—"ರಾಮಾಯಣವು ವೀರಕಾವ್ಯ. ವ್ಯವಹಾರಚಾತುರ್ಯ, ವಿಚಾರ ವೈಭವ, ಭಾಷಾಸೌಷ್ಟವ ಇವೆಲ್ಲವುಗಳಲ್ಲಿ ಇದಕ್ಕೆ ಸರಿಗಟ್ಟುವ ಕಾವ್ಯಗಳೇ ಜಗತ್ತಿನಲ್ಲಿಲ್ಲ."

**ಸರ ಎಂ. ಮೋನಿಯರ ವಿಲಿಯಮ್ಸರು:**—"ರಾಮಾಯಣ ಕಾವ್ಯದ ಶ್ರೇಷ್ಠ ಮಾದರಿಯ ಆ ಶುದ್ಧ, ಸ್ವಚ್ಛ, ಹಾಗೂ ಒಂದೇ ವಿಧವಾಗಿ ಹರಿಯುವ ಶೈಲಿ, ಕವಿ ಹೃದಯವನ್ನು ಉಕ್ಕಿಸುವಂಥ ಅದರಲ್ಲಿಯ ಹಲವು ಪ್ರಸಂಗಗಳು, ಹೃದಯಂಗಮವಾಗಿ ವರ್ಣಿಸಿದ ವೀರಕಾರ್ಯಗಳು; ಮನತಣಿಸುವಂಥ ಸೃಷ್ಟಿ ಸೌಂದರ್ಯದ ದೃಶ್ಯಗಳು, ಮಾನವೀ ಹೃದಯದ ಅತ್ಯುದಾತ್ತವಾದ ಭಾವನೆಗಳು, ಇವೆಲ್ಲವುಗಳನ್ನು ಲಕ್ಷಿಸಿದರೆ, ಜಗತ್ತಿನಲ್ಲಿಯ ಯಾವುದೇ ಭಾಷೆಯಲ್ಲಾಗಲಿ, ಯಾವುದೇ ಕಾಲದಲ್ಲಾಗಲಿ ಈವರೆಗೆ ಹುಟ್ಟಿದ ಕಾವ್ಯಗಳಲ್ಲದು ಶಿರೋಮಣಿಯಾಗಿರುವದೆನ್ನಬಹುದು. ಸೃಷ್ಟಿವರ್ಣನೆಯು ಆರ್ಯ ಕವಿಗಳದೊಂದು ವೈಶಿಷ್ಟ್ಯವು. ಅದನ್ನು ವರ್ಣಿಸುವ ಸಮಯಬಂದೊಡನೆ ಕವಿಯು ಜೀನತನ ಮಾಡದೆ ತನ್ನಲ್ಲಿದ್ದ ಬಿದ್ದ ಶಬ್ದ-ಸಂಪತ್ತಿಯನ್ನೆಲ್ಲ ವೆಚ್ಚಮಾಡಿ ಅವನೊಂದು ಬೇರೆ ಶಾಬ್ದಿಕ

ಸೃಷ್ಟಿ ಸೌಂದರ್ಯವನ್ನೇ ರಚಿಸುವನು.

**ಗ್ರಿಫಿಥರು:–** "ರಾಮಾಯಣದೊಳಗೆ ಕಾವ್ಯ ಹಾಗು ನೀತಿ ಅವೆರಡೂ ಒಂದೆಡೆಯಲ್ಲಿ ಸೌಂದರ್ಯ ಸುವಾಸನೆಗಳಂತೆ ಕಲೆತಿವೆ. ರಾಮ, ಸೀತಾ, ಲಕ್ಷ್ಮಣ ಮುಂತಾದ ಪಾತ್ರಗಳನ್ನು ನೋಡಿದರೆ ಒಬ್ಬರಕಿಂತ ಒಬ್ಬರು ಮಿಗಿಲಾದವರೇ ಹೊರ್ತು ಕಡಿಮೆಯಿಲ್ಲ."

**ಮಿಸ್.ವ್ಯ್ಯಾರಿಸ್ಕ್ಯಾಟ್: —** "ಕಾವ್ಯವೆಂದರೆ ರಾಮಾಯಣವೇ ಸೈ. ಸೀತೆಯ ಪಾತ್ರವಂತೂ ಜಗದೊಳಗಿನ ಸ್ತ್ರೀ ಸಮೂಹಕ್ಕೇ ಆದರ್ಶ ಭೂತವೂ ಅತ್ಯಂತ ಸ್ಪೃಹಣೀಯವೂ ಆಗಿದೆ."

**ಡಾ. ಎಫ. ಎ ಹ್ಯಾಸ್ಲರರು: —** ಮಹಾಭಾರತದಿಂದ ನನಗೆ ಸಂತೋಷವಾದಷ್ಟು ಮತ್ತಾವುದರಿಂದಲೂ ಆಗಲಿಲ್ಲ. ಮಿಕ್ಕಯಾವ ಗ್ರಂಥಗಳಿಗಿಂತಲೂ ನಾನು ಹೆಚ್ಚು ಸಾರೆ ಮಹಾಭಾರತವನ್ನು ಓದಿ ಸಾವಿರಾರು ಟಿಪ್ಪಣಿಗಳನ್ನು ತೆಗೆದಿಟ್ಟಿರುವೆನು. ಮಹಾಭಾರತದೊಳಗೆ ನನಗೆ ಹೊಸದೊಂದು ಜಗವು ಕಾಣಿಸಿತು. ಅದರಲ್ಲಿಯ ವ್ಯವಹಾರ ಜ್ಞಾನ, ಸತ್ಯಪ್ರೀತಿ, ನ್ಯಾಯಪ್ರೀತಿ, ಧನು ಮುಂತಾದವುಗಳನ್ನು ಕಂಡು ನಾನು ಬೆರಗಾದೆ.

**ಸೆಂಟ ಹಿಲೆರಿ ಬಾರ್ಥಲೋಮಿ:—** " ನೂರು ವರ್ಷಗಳಾಚೆ ಮಿ. ವಿಲ್ಕಿನ್ಸ ಎಂಬುವರು ಕಲಕತ್ತೆಯಿಂದ ಮಹಾಭಾರತದಲ್ಲಿಯ ಒಂದೆರಡು ಮಾದರಿ ಕವಿತೆಗಳನ್ನು ಪ್ರಕಟಿಸಿದಾಗ ಅದರ ಅರ್ಥ ಗಾಂಭೀರ್ಯ, ಗೂಢ ಭಾವನೆಗಳನ್ನು ಕಂಡು ಜಗತ್ತಿನ ಕಣ್ಣುಗಳು ಕುಕ್ಕಿದವು."

ಕೆಲವರಂತೂ ಇಲಿಯಡ್ ಕಾವ್ಯವು ರಾಮಾಯಣವನ್ನು ನೋಡಿಕೊಂಡೇ ಬರೆಯಲ್ಪಟ್ಟಿದೆಯೆಂದೆನ್ನುವರು. ಕಥೆ ಒಂದೇ ಹೆಸರು ಬೇರೆ. ಈಲಿಯಡ್ ಕಾವ್ಯದೊಳಗಿನ ಟ್ರಾಯ ಪಟ್ಟಣವೇ ನಮ್ಮಲ್ಲಿಯ ಲಂಕಾ, ಸ್ಪಾರ್ಟಾ ಅಂದರೆ ಅಯೋಧ್ಯಾ, ಮೆನೆಲಾಸ ಅಂದರೆ ರಾಮ, ಪ್ಯಾರಿಸ ಅಂದರೆ ರಾವಣ, ಹೀಗೆ ಹೊಂದಿಸಿದರೆ ಕೂಡುತ್ತವೆ.

ಇವೆರಡು ಮಹಾ ಕಾವ್ಯಗಳಲ್ಲದೆ, ಹೆಚ್ಚು ಕಡಿಮೆ ಅಂಶದಿಂದ ಇವುಗಳಿಗೆ ಸರಿ ಹೋಲುವ ಚಿಕ್ಕ ಕಾವ್ಯಗಳಿವೆ. ಅವುಗಳಲ್ಲಿ ರಘುವಂಶ, ಶಿಶುಪಾಲವಧ, ಕಿರಾತ, ಕುಮಾರಸಂಭವ ಮುಂತಾದವು. ಮಿ.ಕೋಲಬ್ರುಕ

ರಂತೂ ರಘುವಂಶವನ್ನು ಬಾಯಿ ಹಿಡಿಸಲಾರದಷ್ಟು ಹೊಗಳಿದ್ದು, ಶಿಶುಪಾಲವಧ, ಕಿರಾತಾರ್ಜುನೀಯ ಈ ಕಾವ್ಯಗಳ ಪ್ರಾಸ, ಶಬ್ದಸಂಪತ್ತಿ, ವೀರ್ಯ ಮುಂತಾದವುಗಳಂತೂ ಮಿಗಿಲಾದವುಗಳೆಂದು ಅಂದಿರುವರು. ಮಿ. ಗ್ರಿಫಿಥರು ಕುಮಾರಸಂಭವವನ್ನು ವರ್ಣಿಸುವಾಗ- ಈ ಕಾವ್ಯವು ಮನೋಹರವೂ ಕಲ್ಪನಾ ಪೂರ್ಣವೂ ಇರುವದಲ್ಲದೆ, ಕವಿಯು ತನ್ನಲ್ಲಿರುವ ಶಬ್ದಚಾತುರ್ಯ, ಬುದ್ಧಿ ಚಾತುರ್ಯ ಮುಂತಾದವುಗಳನ್ನು ಕೈ ಸಡಿಲು ಬಿಟ್ಟು ಬಳಸಲಿಕ್ಕೆ ಅನುಮಾನಿಸಿರುವದಿಲ್ಲವೆಂದು ಬರೆದಿದ್ದಾರೆ. ನಲೋದಯ ಕಾವ್ಯದ ಬಗ್ಗೆ ಬರೆಯುವಾಗ ಅದೇ ಗ್ರಂಥಕರ್ತನೇ "ಸಂಸ್ಕೃತ ವಾಙ್ಮಯದಲ್ಲಿ ಯಾವ ಬಗೆಯ ಶಕ್ತಿಯಿರುವದೆಂಬುದನ್ನು ನೋಡಬೇಕಿದ್ದರೆ, ನಲೋದಯ ಕಾವ್ಯವನ್ನು ಓದಬೇಕು;" ಎಂದು ಶಿಫಾರಸು ಮಾಡಿರುವನು; "ವೃತ್ತಗಳ ಚಮತ್ಕೃತಿ ಹಾಗೂ ಅವುಗಳ ವಿಧಗಳನ್ನು ಕಣ್ತುಂಬನೋಡುವದಿದ್ದರೆ, ನಲೋದಯವನ್ನು ಓದಲಿಕ್ಕೆಬೇಕು. ಅದೊಂದು ಪೂರ್ಣ ಕಾವ್ಯವಿದೆ" ಎಂದು ಮಿ. ಕೋಲಬ್ರುಕರು ಸ್ತುತಿಸಿದ್ದಾರೆ.

ಪ್ರಾಚೀನ ಹಿಂದೂಜನರ ಕಲ್ಪಕ ಶಕ್ತಿಯು ಬೆಳಸು ಇದ್ದಂತೆಯೇ ವಿಶಾಲವೂ ಆಗಿದ್ದಿತು; ಅಂತೆಯೇ ಅಲ್ಲಿಯ ಮಹಾ-ಪರ್ವತ, ಮಹಾ-ನದಿ, ಹಾಗೂ ವಿಶಾಲವಾದ ಬೈಲುಗಳಂತೆ, ಅಲ್ಲಿಯವರ ಬುದ್ಧಿ-ಶಕ್ತಿ ಮತ್ತು ವೈಭವಗಳು ಸಂಕುಚಿತ ಬುದ್ಧಿಯವರನ್ನು ಗಾಬರಿಗೊಳಿಸುವದುಂಟು.

**ನಾಟಕಗಳು**:— ಪ್ರಾಚೀನ ಆರ್ಯರ ನಾಟ್ಯಗ್ರಂಥಗಳೂ ಅಷ್ಟೇ ಶ್ರೇಷ್ಠ ವರ್ಗಕ್ಕೆ ಸೇರಿದವುಗಳಾಗಿವೆ. ಆರ್ಯ ಕವಿಗಳು ನಾಟಕಗಳನ್ನು ಬರೆಯುವಾಗ ಸೃಷ್ಟಿಯ ದೃಶ್ಯವನ್ನೇ ತಮ್ಮ ಕಣ್ಮುಂದಿಟ್ಟುಕೊಂಡಿರುವಂತೆ ಕಾಣುತ್ತದೆ. ನಾಟಕದೊಳಗಿನ ಪಾತ್ರಗಳೆಲ್ಲವೂ ತಮ್ಮ ತಮ್ಮ ಮಟ್ಟಿಗೆ ಪೂರ್ಣವಿದ್ದು, ಸ್ವಾಭಾವಿಕವಾಗಿರುತ್ತವೆ. ಈ ವಿಷಯದಲ್ಲಿ ಆರ್ಯರ ನಾಟಕಗಳಿಗೆ ಬಹುಮಟ್ಟಿಗೆ ಸೇಕ್ಸಪೀಯರನ ನಾಟಕಗಳು ಹೋಲುತ್ತವೆಂದರೂ ಅಡ್ಡಿಯಿಲ್ಲ; ಆದರೂ ಭಾಷೆಯ ಸೌಂದರ್ಯ ಹಾಗೂ ವೈಭವಗಳಲ್ಲಿ ಸಂಸ್ಕೃತದ ಕೈಯೇ ಮೇಲು. ಆರ್ಯಕವಿಯು ತನ್ನ ನಾಟಕಗಳಲ್ಲಿ ಸೃಷ್ಟಿಸೌಂದರ್ಯಕ್ಕಷ್ಟೇ ಕೈ ಹಚ್ಚಿ ಬಿಡದೆ, ಒಳಗಣ್ಣಿಗೆ ಗೋಚರ

ವಾಗುವ ಮನುಷ್ಯನ ಮನೋಸೃಷ್ಟಿಯನ್ನು ಹೊಕ್ಕು, ಅಲ್ಲಿ ಏಳುವಂಥ ಅನೇಕ ಸುಂದರವಾದ ತೆರೆಗಳನ್ನೂ, ವಿವಿಧ ಭಾವನೆಗಳನ್ನೂ, ವಾಸನೆಗಳನ್ನೂ, ಒಲವುಗಳನ್ನೂ, ಗುಣದೋಷಗಳನ್ನೂ ಮನೋವೃತ್ತಿಯಲ್ಲಾಗುವ ವಿಲಕ್ಷಣ ಬದಲಾವಣೆಗಳನ್ನೂ ಸ್ವಾಭಾವಿಕವಾಗಿಯೂ, ಕವಿಸಮಯಕ್ಕನುಗುಣವಾಗಿಯೂ, ಲೆಕ್ಕಣಿಕೆಯಿಂದ ಕೊರೆದಿರುವನು.

ಆದರೆ, ಹಿಂದೂದೇಶಕ್ಕೆ ದುರ್ದೈವದ ಕಾಲವು ಬಂದೊದಗಿದ್ದರಿಂದ ಈ ದೇಶಕ್ಕೆ ತುರುಕರ ಹಾವಳಿಯು ತಗಲಿತು; ಅಂದಿನಿಂದ ಆ ಗಲಭೆಯೊಳಗೆ, ಹಿಂದೂಜನರ ನಾಟಕಗಳ ಬರವಣಿಗೆಯೇ ನಿಂತುಹೋಯಿತು; ಅಲ್ಲದೆ ಅವರ ಆಳಿಕೆಯ ಅಬ್ಬರದೊಳಗೆ ಅತ್ಯಂತ ಬೆಲೆಯುಳ್ಳ ಸಂಸ್ಕೃತ ವಾಙ್ಮಯ ಭಂಡಾರವೂ ಬಹುಮಟ್ಟಿಗೆ ಕಳೆದುಹೋಯಿತು.

**ಪ್ರೊ. ವಿಲ್ಸನ್ನರು:—** ನಾಟಕಕ್ಕೆ ಆರ್ಯರು ರೂಪಕವೆನ್ನುವರು; ರೂಪಕಗಳಲ್ಲಿ ೧೦ ವಿಧಗಳಿವೆ. ಇದರ ಮೇಲಿಂದಲೇ ಆರ್ಯರು ತಮ್ಮ ನಾಟ್ಯಕಲೆಯ ಜ್ಞಾನವನ್ನು ಎಷ್ಟು ಬೆಳಿಸಿದ್ದರೆಂಬುದು ಸಿದ್ಧವಾಗುತ್ತದೆ. ಸೌಂದರ್ಯ–ಮಾಧುರ್ಯಗಳ ಸರಿ–ಬೆರಕೆಯುಳ್ಳ ಕಾಲಿದಾಸನಂಥ ಭಾಷೆಯನ್ನು ಕಾಣುವದು ದುರ್ಲಭವೇ ಸರಿ!

**ಪ್ರೊ. ಹೀರನರು:—** “ ಹಿಂದೂ ನಾಟಕಗಳು ಗ್ರೀಕರಿಗಿಂತ ಕೆಲ ಅಂಶಗಳಲ್ಲಿ ಶ್ರೇಷ್ಠವಾಗಿವೆ. ಸಾಮಾನ್ಯವಾಗಿ ಆರ್ಯರು ನಾಟಕಗಳಲ್ಲಿ ನೋಟಕರ ಮನತಣಿಸಲು ನವ–ರಸಗಳನ್ನು ತುಂಬುವದುಂಟು. ಗ್ರೀಕ, ಹಾಗೂ ಲ್ಯಾಟಿನ್ ಹಾಸ್ಯರಸವುಳ್ಳ ನಾಟಕಗಳಿಗಿಂತಲೂ ಹಿಂದೂಗಳ ನಾಟಕಗಳಲ್ಲಿಯ ಪ್ರೇಮದೊಳಗೆ ವಿಷಯಭಾವನೆಯು ಕಡಿಮೆಯಿರುತ್ತದೆ. ವೀರರಸವನ್ನು ಲಕ್ಷಿಸಿದರೆ, ಅದು ಶಾಂತವೂ, ಗಂಭೀರವೂ, ಎಷ್ಟೆಷ್ಟು ವಿಕಾರವಶವಲ್ಲದ್ದೂ ಆಗಿರುತ್ತದೆ. ಹಿಂದೂಗಳ ರಸ–ಸ್ವಾರಸ್ಯವು ಹೆಚ್ಚು ಉಚ್ಚ ಮಾದರಿಯದಾಗಿದೆ. ಸಾಮಾನ್ಯವಾಗಿ ನಾಟಕಗಳಲ್ಲಿ ಹೆಂಗಸರೇ ಹೆಂಗಸರ ಪಾತ್ರಗಳನ್ನು ವಹಿಸುವದುಂಟು. ಗಂಡು ಹುಡುಗನು ಕ್ಲಿಯೋಪಾತ್ರಾನಂಥ ಸ್ತ್ರೀವೇಷ ಧರಿಸುವದು ಹಿಂದೂಜನರಿಗೆ ಅರಿಯದ ಮಾತು. ಒಟ್ಟಿಗೆ ಸೂಕ್ಷ್ಮವಾಗಿ ವಿಚಾರಿಸಿ ಹೇಳಬೇಕೆಂದರೆ, ಹಿಂದೂನಾಟಕಗಳಲ್ಲಿ ಚಿಮಟಿಯಷ್ಟು ಹಾಸ್ಯವಿನೋದಗಳಿದ್ದರೂ, ಗಾಂಭೀರ್ಯ ಶೋಕರಸಗಳ

ಕಲಬೆರಕೆಯಿರುವದು."

ಈ ಮೇರೆಗೆ ರಸಗಳನ್ನು ತೂಕವಾಡಿ ಹಾಕುವದಕ್ಕೆ ಒಂದು ಮುಖ್ಯ ಜೀವಾಳದ ಕಾರಣವಿದೆ; ಅದೇನಂದರೆ, ನಾಟ್ಯಕಲೆಯ ಮುಖ್ಯ ಉದ್ದೇಶವೇನೆಂಬುದನ್ನು ಆರ್ಯರು ಎಂದೂ ಕಣ್ಮರೆಮಾಡಲಿಲ್ಲ. ಇದೀಗ ಆ ಆರ್ಯರ ನಾಟಕಗಳ ಗುಟ್ಟು. ಜಗತ್ತಿನಲ್ಲಿ ಬಾಳಿದ ನಾಟಕಕರ್ತರಲ್ಲಿ ಕಾಲಿದಾಸನ ಹೆಸರು ಶ್ರೇಷ್ಠವೂ ಅಮರವೂ ಆಗಿದೆ. ಈತನು ಕ್ರಿ. ಶ. ಪೂರ್ವದಲ್ಲಿ ಒಂದು ಶತಮಾನದ ಮೊದಲು ಆಳಿದ ವಿಕ್ರಮಾದಿತ್ಯನ ಓಲಗದಲ್ಲಿದ್ದನು. ಈತನ ಬುದ್ಧಿಯು ದ್ರಾಕ್ಷಾಪಾಕವೆಂದರೆ, ಶಾಕುಂತಲ ನಾಟಕವೇ.

**ಪ್ರೊ. ಹೀರನರು:**—ಕಾಲಿದಾಸನ ಕೃತಿಗಳನ್ನೋದಿ ಹುಚ್ಚು ಹಿಡಿದವರಾಗಿ, ಶಾಕುಂತಲದಲ್ಲಿಯ ಸೌಂದರ್ಯ, ಸೌಷ್ಟವ, ಮಾಧುರ್ಯ, ನಿಸರ್ಗ ಪ್ರೇಮ ಇವೆಲ್ಲವುಗಳನ್ನುಕಂಡು ನಾಟಕ ಪ್ರಪಂಚಕ್ಕೇ ಇದು ಶಿರೋಮಣಿಯಾಗಿ ಮೆರೆಯುತ್ತಿದೆಯೆಂದು ಬಹು ಗರುವಾಯಿಯಿಂದ ಅಡಿರುವನು; ಮತ್ತು ಇಷ್ಟಕ್ಕೇನಿಲ್ಲದೆ, ಕಾಲಿದಾಸನು ತನ್ನ ಅಪ್ರತಿಮವಾದ ಕಾವ್ಯ-ನಾಟಕಗಳನ್ನು ಜಗತ್ತಿನಲ್ಲಿಟ್ಟು, ಆರ್ಯಜನಾಂಗಕ್ಕೆಮಾತ್ರ ಗೌರವ ತಂದಿರುವನಲ್ಲದೆ, ನಾಗರಿಕತೆ ಹೊಂದಿದ ಮನುಷ್ಯಜಾತಿಗೇನೇ ಗೌರವವನ್ನು ಉಂಟುಮಾಡಿದನು. ಎಂದಿರುವರು.

**ಜರ್ಮನ್ ಕವಿ ಗಟೆ:**—"ಶಕುಂತಲೆ ಎಂಬ ಹೆಸರಿನಲ್ಲಿ ಭೂಮಿ, ಸ್ವರ್ಗಗಳೆರಡೂ ಕೂಡಿರುತ್ತವೆ" ಎಂದು ಮನವಾರೆ ಹಾಡಿದ್ದಾರೆ.

**ಪ್ರೊ. ಮ್ಯಾಕ್ಡೋನೆಲ್:**—ಶಕುಂತಲಾ ನಾಟಕವೇ ಆಧುನಿಕ ಯುರೋಪಿಯ ನಾಟಕಗಳಿಗೆ ಹೊಸ ಚೈತನ್ಯವನ್ನುಂಟುಮಾಡಿತು; ಅದುವೇ ಗಟೆಕವಿಗೆ ಫೌಸ್ಟ ಎಂಬ ಸಂವಾದಾತ್ಮಕ ನಾಟಕವನ್ನು ಬರೆಯು ಹಚ್ಚಿತು. ಸಂಸ್ಕೃತ ಕಾವ್ಯಗಳಲ್ಲಿ ನಿಸರ್ಗವರ್ಣನೆಗೆ ಮೇಲಾದ ಸನ್ಮಾನ ದೊರೆತಿದೆ; ಇಷ್ಟೊಂದು ವರ್ಣನೆಯು ಬೇರೆ ಯಾವಭಾಷೆಯ ನಾಟಕ ಗ್ರಂಥಗಳಲ್ಲಿಯೂ ಕಾಣಿಸದು; ಅದೇತಾನೇ ಅರಳುತ್ತಿರುವ ಮೊಗ್ಗೆಗೆ ಹೋಲಿಸಿದ ಶಕುಂತಲೆಯ ತುಟಿಗಳು, ಎಳೆಬಾಳೆಯ ಸುಳಿಗೆ ಹೋಲಿಸಿದ ಆಕೆಯ ಆ ನಳಿದೋಳುಗಳು ಅದೇ ತಾನೇ ಚಿಗುರುತ್ತಿರುವ ಗಿಡಕ್ಕೆ

ಹೋಲಿಸಿದ ಅವಳ ತುಂಬು-ಯೌವನದದೇಹವು, ಅಂಗಾಂಗಗಳಲ್ಲೆಲ್ಲ ಮೂಡಿ ಮಿಂಚುತ್ತಿರುವ ಆ ಏರು-ಯೌವನದ ಸೊಬಗು" ಎಂದು ಮುಂತಾಗಿ ದುಷ್ಯಂತನು ಶಕುಂತಲೆಯನ್ನು ಕುರಿತು ತೆಗೆದ ಉದ್ಗಾರಗಳನ್ನೋದಿದರೆ ಸೃಷ್ಟಿಸೌಂದರ್ಯವೇ ಕಣ್ಣಿಗೆ ಕಟ್ಟುತ್ತದೆ. ಎಷ್ಟು ಸತ್ವಪೂರ್ಣ ವರ್ಣನೆ ಇದು?

ಮಹಾಕವಿ ಕಾಲಿದಾಸನ ಮತ್ತೊಂದು ಹಿರಿದಾದ ನಾಟಕವೆಂದರೆ, ವಿಕ್ರಮೋರ್ವಶಿಯವು. ಇದನ್ನು ಶಕುಂತಲೆಗೆ ಸರಿಹಚ್ಚಿ ನೋಡುವಾಗ

**ಪ್ರೊ. ವಿಲ್ಸನ್ನರು:—** "ಶಕುಂತಲೆಯಷ್ಟೇ ಈ ನಾಟಕದ ವರ್ಣನೆಯಲ್ಲಿಯೂ ಒಂದುವಿಧದ ಮಿಂಚು, ಭಾವನೆಯಲ್ಲಿ ಮಾರ್ದವ, ವಿಚಾರಗಳಲ್ಲಿ ಒಂದು ಬಗೆಯ ಸೂಕ್ಷ್ಮಸೌಂದರ್ಯ, ಭಾಷೆಯಲ್ಲಿ ಮೀರಿಸುವ ಸ್ವಾರಸ್ಯ ಇವೆಲ್ಲವು ಅವೆ; ಆದರೂ ಈ ಕಥೆಯನ್ನು ಕಾಲಿದಾಸನು ಹೆಚ್ಚು ಜಾಣ್ಮೆಯಿಂದ ಹೆಣೆದಿರುವದರಿಂದ ಶಕುಂತಲೆಗಿಂತ ಇದು ಹೆಚ್ಚು ನೈಸರ್ಗಿಕವಾಗಿದೆ. ವಿಕ್ರಮೋರ್ವಶಿಯ ಕಥೆಯನ್ನು ಕವಿಯು ಶತಪಥ ಬ್ರಾಹ್ಮಣದಿಂದ ತೆಗೆದುಕೊಂಡಿದ್ದು, ಪುರೂರವ ಎಂದರೆ ಸೂರ್ಯನೆಂತಲೂ, ಉರ್ವಶಿ ಎಂದರೆ ಮಂಜು ಎಂತಲೂ, ಆ ಕಲ್ಪನೆಯ ರೂಪಕವಿದೆಂತಲೂ ಕೆಲ ಪಾಶ್ಚಾತ್ಯ ಗ್ರಂಥಕಾರರು ಅರ್ಥಮಾಡಿದ್ದಾರೆ. ಭವಭೂತಿಯ ಉತ್ತರ-ರಾಮಚರಿತ್ರ ಹಾಗೂ ಮಾಲತೀಮಾಧವ ನಾಟಕಗಳನ್ನು ಕುರಿತು ಬರೆಯುವಾಗ ಉತ್ತರರಾಮದೊಳಗಿನ ಶುದ್ಧ ಕರುಣರಸವು, ಶ್ರೀರಾಮಚಂದ್ರ ಸೀತೆಯರ ವಿಯೋಗಜನ್ಯ ಸ್ವಾಭಾವಿಕವಾದ ಮನಕರಗಿಸುವ ಉದ್ಗಾರಗಳು, ಬಾಲ್ಯದ ಸ್ಮರಣೆ, ಗೋದಾವರಿತೀರದ ಆ ಸೊಬಗಿನ ವರ್ಣನೆ, ಅವೆಲ್ಲವುಗಳನ್ನು ಕುರಿತು ಸೂಕ್ಷ್ಮವಾಗಿ ವಿಚಾರಮಾಡ ತೊಡಗಿದರೆ, ಭವಭೂತಿಯ ಭಾಷೆಯ ಪ್ರಭುತ್ವ, ನಿಸರ್ಗವನ್ನು ಬಣ್ಣಿಸುವ ಆತನ ಬುದ್ಧಿವಿಶೇಷಗಳ ಬಗ್ಗೆ ಯಾರಿಗಾದರೂ ಸಾನಂದಾಶ್ಚರ್ಯವೆನಿಸದಿರದು; ಅದರೊಳಗೂ, ಆ ನಾಟಕಗಳಲ್ಲಿ ಅಲ್ಲಲ್ಲಿ ಮಲ್ಲಿಗೆಯ ಹೂವುಗಳಂತೆ ಕವಿಯು ಎರಚಿದ ಮಧುರತರ ಭಾವನೆಗಳನ್ನೂ, ವಜ್ರದಂಥ ವೀರ್ಯವತ್ತರವಾದ ನುಡಿಗಳನ್ನೂ ಓದಿದರೆ, ಒಂದೇಕಾಲಕ್ಕೆ ಈ ಕವಿಯಲ್ಲಿ ಪರಸ್ಪರ-ವಿರುದ್ಧ ಧರ್ಮವುಳ್ಳ ಎರಡು ಬಗೆಯ ಭಾವನೆಗಳು ಒಂದೇಸಮನಾಗಿ

ನೆಲಸಿದ್ದನ್ನು ಕಂಡರೆ, ಜಗತ್ತಿನೊಳಗಿನ ವಾಙ್ಮಯದೊಳಗೆ ಇಂಥ ದೃಶ್ಯವನ್ನು ಕಾಣುವದು ಅಪರೂಪ."

ಮುದ್ರಾರಾಕ್ಷಸವೆಂಬ ರಾಜಕೀಯ ನಾಟಕದಲ್ಲಿ ವಿಶಾಖದತ್ತನು- ಹೇಳಿದ ಆರ್ಯರ ರಾಜಕೀಯ ಜೀವನ ಹಾಗೂ ಅದರ ಬಗೆಯನ್ನೂ ಪಟ್ಟಣವಾಸದ ಚಟುವಟಿಕೆಯನ್ನೂ, ಒಲಗದಲ್ಲಿ ನಡೆಯುವ ಗುಪ್ತ-ಕಾರ್ಯ ಕಲಾಪಗಳನ್ನೂ, ರಾಜನ ವಿಷಯದಲ್ಲಿ ಸೇವಕರ, ರಾಯಭಾರಿಗಳ ಹಾಗೂ ರಾಜ ಸ್ನೇಹಿಗಳ ಶುದ್ಧ ರಾಜನಿಷ್ಠೆಯನ್ನೂ ನಿರೀಕ್ಷಿಸಿದರೆ, ಅವೆಲ್ಲವೂ ಹಿಂದೂ ಸಂಸ್ಕೃತಿಯ ಬಣ್ಣದಿಂದ ಮಿಸುಗುತ್ತಿವೆ.

**ಪ್ರೊ. ವಿಲ್ಸನ್ನರು ಬರೆಯುವದು:—** ಇದೊಂದು ರಾಜಕಾರ್ಯ ಹಾಗೂ ಇತಿಹಾಸದಿಂದ ಕೂಡಿದ ನಾಟಕ; ಚಾಣಕ್ಯನ ಚತುರ ರಾಜ ನೀತಿಯ ಇದು ಕೈಗನ್ನಡಿ. ರಾಜಕಾರ್ಯದ ಬಗ್ಗೆ ಇಷ್ಟು ಹಿರಿದಾದ ನಾಟಕವು ಬೇರೊಂದಿಲ್ಲ.

ಪ್ರೊ. ವಿಲ್ಸನ್ನರು:— "ಪ್ರಬೋಧ ಚಂದ್ರೋದಯ ನಾಟಕವನ್ನು ಕುರಿತು– ಈ ನಾಟಕದ ಸಂವಿಧಾನಕವೇ ಏನೋ ಬಹು ಸೋಜಿಗವಾದು ದಾಗಿದೆ. ಕೃಷ್ಣಮಿಶ್ರನ ರಚನಾ ಶಕ್ತಿಯು ಅಗಾಧವಾದುದು."

**ಭಾವಕಾವ್ಯ**:–ಭಾರತೀಯರ ಭಾವಕಾವ್ಯ (Lyric poetry) ವು ಜಗತ್ತಿನ ಮನ್ನಣೆಗೆ ಪಾತ್ರವಾಗಿದೆ; ಅದರ ಸ್ವಾರಸ್ಯವೆಲ್ಲವೂ ಅದರ ಅರ್ಥಕ್ಕೆ ಹೊಂದುವ ಇಂಪಾದ ಮಟ್ಟಿನಲ್ಲಿಯೇ ಅಡಕವಾಗಿರುತ್ತದೆ. ಸಂಸ್ಕೃತದಲ್ಲಿ ಇಂಥ ಭಾವ್ಯಕಾವ್ಯಗಳು ವೆಗ್ಗಳವಾಗಿವೆ.

**ಪ್ರೊ. ಮ್ಯಾಕ್‌ಡೋನೆಲ್ಲರು ಅನ್ನುವದು:—** ಭಾವಕಾವ್ಯದಲ್ಲಿ ವಿವಿಧ ಛಂದಸ್ಸುಗಳನ್ನು ಉಪಯೋಗಿಸಿದ್ದರೂ ಅವೆಲ್ಲ ಬಹು ಶ್ರುತಿಮನೋ ಹರವಾಗಿರುವವು. ಈ ಕಾವ್ಯದಲ್ಲಿ ರಾಗ ಹಾಗೂ ಭಾವಗಳು ಕೂಡಿ ಒಂದಾಗಿ ಹರಿಯುತ್ತವೆ. ಇವುಗಳ ಹಾರ್ದವನ್ನು ತಿಳಿಯಬೇಕೆಂದರೆ, ಮನುಷ್ಯನು ಸೃಷ್ಟಿಯ ಬಗೆ ಬಗೆಯ ಋತುಮಾನಗಳನ್ನೂ, ಆಯಾ ಋತುಗಳಲ್ಲಿಯ ರಮಣೀಯ ವನಶ್ರೀಯ ದೃಶ್ಯಗಳನ್ನೂ ಹಕ್ಕಿಗಳ ಗಾನದ ಸೊಂಪನ್ನೂ ಅರಿತಿರಲಿಕ್ಕೆಬೇಕು.

ಭಾವಕಾವ್ಯಗಳಲ್ಲಿ ಗೀತಗೋವಿಂದವೇ ಅತ್ಯಂತ ಸುಂದರವೂ

ಗಂಭೀರವೂ ಮಧುರಪೂರ್ಣವೂ ಆಗಿದೆ. ಇದಕ್ಕೆ ಜಗದೊಳಗೆ ಸರಿಗಟ್ಟುವ ಕಾವ್ಯಗಳಿಲ್ಲ. ರಸಿಕತೆ, ಭಾವಸಂಪತ್ತಿ, ಕೃಷ್ಣಭಕ್ತಿಯ ಅಗ್ಗಳಿಕೆ, ಇವೀಗ ಈ ಕಾವ್ಯದ ವೈಶಿಷ್ಟ್ಯಗಳು. ಭಾವನೆಯೇ ಇದರ ಜೀವಾಳ. ಇದನ್ನೋದುವವರಿಗೆ ಕೃಷ್ಣಭಕ್ತಿಯ ಹುಚ್ಚು ಹಿಡಿಸುವದೇ ಇದರ ಪ್ರಯೋಜನ.

**ಮಿ. ಗ್ರಿಫಿಥರು ಅನ್ನುವದು:—** ಇದರಲ್ಲಿಯ ಗೀತಿಗಳಲ್ಲಿ ಪರಾಕಾಷ್ಠೆಯ ಸೊಂಪು–ಇಂಪುಗಳು ಸೂಸುತ್ತಿವೆ; ಆದರೆ ಮೂಲ ಕಾವ್ಯದ ಸ್ವಾರಸ್ಯವನ್ನು ಅರಿತವನಿಗೇನೇ ಅದರ ಸುಖ.

**ಮಿ. ಸ್ಲೆಜೆಲ್ಲಸಾಹೇಬರು ಬರೆಯುವದು:—** ಗೀತಗೋವಿಂದ ಕಾವ್ಯದಲ್ಲಿ ಭಾವನೆಯ ನಾಜೂಕತನ ಮತ್ತು ಶೋಕರಸದ ಸೋನೆಯು ಸುರಿಯುತ್ತಿದೆ.

ಮೇಘದೂತವು ವರ್ಣ್ಯಕಾವ್ಯವೆಂಬ ದೃಷ್ಟಿಯಿಂದ ಅತ್ಯಂತ ಶ್ರೇಷ್ಠವೆಂದೆಣಿಸಲ್ಪಟ್ಟಿದೆ. ಅದರೊಳಗೆ ಕಂಡುಬರುವ ಹಿಮಾಲಯದ ಮೆಲ್ತರಗತಿಯ ಸೃಷ್ಟಿಸೌಂದರ್ಯದ ವರ್ಣನೆಯನ್ನು ಒಂದು ಲೆಕ್ಕಣಿಕೆಯಿಂದ ಬಣ್ಣಿಸಲೂ ಅಸಾಧ್ಯ; ಅದೊಂದು ರಸಿಕರ ಮಾನಸೋಲ್ಲಾಸವೇ ಸರಿ. ಮೇಘದೂತದ ಭಾಷೆಯ ಬಗ್ಗೆ

**ಪ್ರೊ. ವಿಲ್ಸನ್ನರು ವರ್ಣಿಸುವದು:—** "ಈ ಕಾವ್ಯದಲ್ಲಿ ಸಮಾಸ–ಸಂಪತ್ತಿಯ ಬಹು ಗಡಚಾಗಿದ್ದರೂ ಅದರಿಂದ ಕಾವ್ಯಕ್ಕೆ ಕುಂದು ತಟ್ಟಿಲ್ಲ. ಛಂದಸ್ಸಿನಲ್ಲಿ ಮಾಧುರ್ಯ ಗಾಂಭೀರ್ಯಗಳೆರಡೂ ಬಹು ವಿಲಕ್ಷಣರೀತಿಯಿಂದ ಕೂಡಿಕೊಂಡಿವೆ. ಜೀವಂತ ಅಥವಾ ಮೃತ ಭಾಷೆಗಳಲ್ಲಿ ಕಾಣದ ಅತ್ಯುತ್ತಮ ಮಾದರಿಗಳನ್ನು ನಾವಿಲ್ಲಿ ಕಾಣ ಬಹುದು.

**ಪ್ರಿನ್ಸಿಪಾಲ ಟಾನಿಯವರು ಅನ್ನುವದು:—** ಮೇಘದೂತದಲ್ಲಿ ಭಾಷೆಯಿಂದ ಭಾವನೆಗಳನ್ನು ಚಿತ್ರಿಸುವ ಕಲೆಯೂ ಪೂರ್ಣಸ್ಥಿತಿಗೆ ಮುಟ್ಟಿದೆ.

**ಫೌಚೆಯವರು ಅನ್ನುವದು:—** ಯುರೋಪಿಯ ಶೋಕರಸ ಗೀತಗಳಲ್ಲೆಲ್ಲ ಮೇಘದೂತಕ್ಕೆ ಸರಿಗಟ್ಟುವ ಕಾವ್ಯಗಳನ್ನು ಕಾಣುವದು ಅಪರೂಪ.

**ಪ್ರೊ. ಮೋನಿಯರ ವಿಲಿಯಮ್ಸರ ಅಭಿಪ್ರಾಯ:—** ಮೇಘ

ದೂತದಲ್ಲಿ ಹೋಮರನ ಗಾಂಭೀರ್ಯವೂ, ವ್ಹರ್ಜಿಲ್ಲನ ಲಾಲಿತ್ಯವೂ, ಓವ್ಹಿಡ್ಡನ ಸಿರಿವಂತಿಕೆಯೂ, ಶೇಕ್ಸಪೀಯರನ ಆಳವೂ ಕೂಡಿರುತ್ತವೆ; ಇಷ್ಟೆಲ್ಲ ಇದ್ದು ಸಾದಾ-ಸರಲತನದಲ್ಲಿ ಪುರಾತನ ಅಥೇನ್ಸದ ಸೌಂದರ್ಯವನ್ನೂ ಇದು ಹೋಲುತ್ತದೆ.

**ನೀತಿ ಬೋಧಕ ಕಾವ್ಯ—** ನೀತಿ ಬೋಧಕ ಕಾವ್ಯಗಳಲ್ಲಿ ಪಂಚತಂತ್ರ, ಹಿತೋಪದೇಶ, ಬೃಹತ್ಕಥಾ ಮುಂತಾದವುಗಳು ಒಳಗೊಳ್ಳುವವು; ಅಲ್ಲದೆ ಕಾಲಿದಾಸಾದಿ ಮಹಾಕವಿಗಳು ತಮ್ಮ ತಮ್ಮ ಕಾವ್ಯಗಳಲ್ಲಿ ಬಹುಮಟ್ಟಿಗೆ ಅಲ್ಲಲ್ಲಿ ನೀತಿತತ್ವಗಳನ್ನು ಪ್ರೋಣಿಸಿರುವರು.

**ಪ್ರೊ. ವಿಲ್ಸನ್ನರು ಬರೆಯುವದು:—** ಕಟ್ಟುಕಥೆ ಕಾದಂಬರಿಗಳೆಂದರೆ ಹಿಂದೂಜನರಿಗೆ ವ್ಯವಹಾರಿಕ ನೀತಿಶಾಸ್ತ್ರಗಳೇ! ಸೃಷ್ಟಿಯ ವ್ಯವಹಾರಜ್ಞಾನ ಮಾಡಿಕೊಡಲಿಕ್ಕೆ ಇವುಗಳ ಪ್ರಯೋಜನವು ಅಷ್ಟಿಷ್ಟಲ್ಲ. ಒಂದೊಂದು ಕಥೆಗಳಲ್ಲಿ ಒಂದು ವ್ಯಾವಹಾರಿಕ ಸತ್ಯವು ಅಡಕವಾಗಿದೆ; ಕಥೆ ಹೇಳುವ ಈ ಪದ್ಧತಿಯು ಹಿಂದುಸ್ಥಾನದ ವಿಶಿಷ್ಟ ಲಕ್ಷಣವಾಗಿದೆ. ಇಂತಹ ಕಥಾವಾಙ್ಮಯದಲ್ಲಿ ಪಂಚತಂತ್ರವೆಂದರೆ ಅದೊಂದು ಹಿರಿಗತೆ; ಇಷ್ಟೇಅಲ್ಲದೆ. ಏಸಿಯಾ ಯುರೋಪದಲ್ಲಿಯ ಕಥಾವಾಙ್ಮಯಕ್ಕೆಲ್ಲ ಇದೇ ಉಗಮವು.

**ಮಿ. ಎಲ್‌ಫಿನ್‌ಸ್ಟನ್ನರ ಅಭಿಪ್ರಾಯ:—** ಕಥೆ ಕಾದಂಬರಿಗಳನ್ನು ರಚಿಸುವದರಲ್ಲಿ ಹಿಂದುಗಳು ಜಗಕ್ಕೆ ಗುರುಗಳು.

**ಫೆರಿಸ್ತಾ ಎಂಬ ಇತಿಹಾಸಗಾರನು ನುಡಿಯುವದು:**—ಇರಾಣದ ಅರಸನಾದ ನಶರವಾನನು ಪಂಚತಂತ್ರವನ್ನು ಹಿಂದುಸ್ಥಾನದ ಅರಸನಿಂದ ತರಿಸಿ ಪೆಹಲವೀಭಾಷೆಯಲ್ಲಿ ಅದನ್ನು ಬರೆಯಿಸಿದನು; ಮುಂದೆ ಅದೇ ಅರಬಿಭಾಷೆಯಲ್ಲಿಯೂ ಬರೆಯಲಾಯಿತು.

**ಡಾ. ಹಂಟರಸಾಹೇಬರು:—**"ಪಶುಗಳಬಗ್ಗೆ ಕಥೆ ಹೇಳುವ ಪದ್ಧತಿಯು ಇಸೋಪನಿಂದ ಪಶ್ಚಿಮದೇಶದಲ್ಲಿ ಪ್ರಾರಂಭವಾದರೂ ಇದಕ್ಕೆಲ್ಲ ಹಿಂದುಸ್ಥಾನವೇ ತೌರುಮನೆ."

**ಸರ ಜಾನ್ ಮಾಲ್ಕಮ್‌ರು:—**"ಪೂರ್ವದೇಶಗಳಲ್ಲಿ ಅತ್ಯಂತ ಪ್ರತಿಭಾವಂತರೂ, ಶ್ರೇಷ್ಠರೂ ಎಂದೆನಿಸಿಕೊಂಡವರು ತಮ್ಮ ಬುದ್ಧಿಯನ್ನು

ಕಟ್ಟುಕಥೆಗಳಲ್ಲಿ ಉಪಯೋಗಿಸಿ ನೀತಿವಾಙ್ಮಯವನ್ನೂ ಅದರ ದ್ವಾರದಿಂದ ನೀತಿ ನಡೆವಳಿಕೆಯ ಬಳಿಕೆಯನ್ನೂ ಜಗತ್ತಿನಲ್ಲಿ ಹಬ್ಬಿಸಿದ್ದಾರೆ. ”

**ಪ್ರೊ. ಹೀರನರು:—**“ ಯಾವದೇಶದ ಕಾವ್ಯ ವಾಙ್ಮಯವೂ ನೀತಿ ತತ್ವಗಳನ್ನು ಇಷ್ಟು ಒಡೆದುಕಾಣಿಸುವಂತೆ ಬಣ್ಣಿಸಿಲ್ಲ; ಯಾಕಂದರೆ ಹಿಂದೂಗಳ ಹೊರ್ತು ಅನ್ಯ ಯಾರಿಗೂ ನೀತಿಶಿಕ್ಷಣವು ಜನ್ಮದ ಕೊನೆಯ ಉದ್ದೇಶವಾಗಿರಲಿಲ್ಲ.

**ಇತಿಹಾಸ ಬರೆಯುವ ಕಲೆ:—** ಒಂದು ಸಂಗತಿಯನ್ನು ಕುರಿತು ಮಾತ್ರ ಇಲ್ಲಿ ಹೇಳಲಿಕ್ಕೆ ಮನಸು ಕಳವಳಗೊಳ್ಳುವದು; ಅದೇನಂದರೆ, ಹಿಂದುಸ್ಥಾನದ ಯಾವುದೇ ಒಂದು ಐತಿಹಾಸಿಕ ಸಂಗತಿಯನ್ನು ಕುರಿತು ಅಧಿಕಾರ ವಾಣಿಯಿಂದ ಮಾತಾಡಬೇಕೆಂದರೆ, ಐತಿಹಾಸಿಕ ಆಧಾರಗಳ ಕೊರತೆಯು ಹಿಂದೂ ಇತಿಹಾಸಗಾರನನ್ನು ಬಹು ಹಿಂದಕ್ಕೆಳೆಯುತ್ತದೆ; ಯಾಕಂದರೆ, ಹಿಂದೂದೇಶಕ್ಕೆ ದಾಳಿಯಿಟ್ಟ ಅರಬ, ಮೊಗಲ, ತಾರ್ತರ, ತುರ್ಕಜನರು ಹಿಂದುಸ್ಥಾನ, ಇಜಿಪ್ತ, ಇರಾಣ, ಗ್ರೀಸ ಮುಂತಾದ ದೇಶಗಳಲ್ಲಿಯ ಪುರಾತನ ವಾಙ್ಮಯ ಭಂಡಾರ ಇತಿಹಾಸ ಭಂಡಾರ ಮುಂತಾದವುಗಳನ್ನು ಹಾಳು ಮಾಡಿದ್ದರಿಂದ ಈ ಸ್ಥಿತಿಯು ಪ್ರಾಪ್ತವಾಗಿದೆ. ಅಲೆಕ್ಸಾಂಡ್ರಾದೊಳಗಿನ (ಇಜಿಪ್ತ) ಅತಿ ದೊಡ್ಡ ಹಾಗೂ ಪುರಾತನ ಗ್ರಂಥಾಲಯವನ್ನು ಮೇಲ್ಕಾಣಿಸಿದ ದಾಳಿಗರು ಸುಟ್ಟು ಮಾನವಜಾತಿಯ ಮುನ್ನಡೆಯನ್ನೇ ಕನಿಷ್ಠ ಪಕ್ಷಕ್ಕೆ ಒಂದು ಸಾವಿರ ವರ್ಷ ಹಿಂದೆಳೆದರು. ಹಿಂದುಸ್ಥಾನದಲ್ಲಿಯ ದೊಡ್ಡ ದೊಡ್ಡ ಪ್ರಾಚೀನ ಗ್ರಂಥಾಲಯಗಳು ಈ ದಾಳಿಗಾರರ ದವಡೆಗೆ ಸಿಕ್ಕು ಎಷ್ಟು ಹಾನಿಯಾಗಿರುವವೆಂಬುದನ್ನು ಹೇಳಲಿಕ್ಕೆ ಬಾಯಿ ಸಾಲದು; ಬುದ್ಧಗಯೆಯಲ್ಲಿಯ ಒಂಬತ್ತು ಅಂತಸ್ತಿನ ಗ್ರಂಥಾಲಯ (ಗ್ರಂಥಾಲಯ) ದಲ್ಲಿ ಅನೇಕ ಬುದ್ಧ ಮೂರ್ತಿಗಳಿದ್ದವು; ಧರ್ಮಗಂಜದ ನಾಲಂದ ವಿಶ್ವವಿದ್ಯಾಲಯದ ಹತ್ತಿರ ರತ್ನೋದಧಿ ಎಂಬ ಹೆಸರಿನ ಒಂಬತ್ತು ಉಪ್ಪರಿಗೆಯ ದೇವಾಲಯವಿದ್ದು ಅಲ್ಲಿ ಬೌದ್ಧರ ಮಹಾ-ಯಾನ, ಹೀನಯಾನದ ಸಾವಿರಾರು ಗ್ರಂಥಗಳು ಇಡಲ್ಪಟ್ಟಿದ್ದವು; ಇವೆರಡರಕಿಂತಲೂ ದೊಡ್ಡದೂ ವಿಶಾಲವೂ ಆದ ಉದಂತಪುರಿಯ ವಿಹಾರದಲ್ಲಿ ಬೌದ್ಧ ಹಾಗೂ ಬ್ರಾಹ್ಮಣರ ಅತಿ ದೊಡ್ಡ ಗ್ರಂಥಾಲಯವಿದ್ದಿತು;

ಇವೆಲ್ಲವೂ ಬಕ್ತಿಯಾರಖಿಲ್ಜಿ, ಮೊದಲಾದವರ ದಾಳಿಗೆ ಬಲಿಯಾದವು; ಮುಂದೆ ಸುಲ್ತಾನ ಅಲ್ಲಾಉದ್ದೀನ ಖಿಲ್ಜಿಯ ಆಳಿಕೆಯಲ್ಲಿ ಕೂಡ ಅನಹಿಲವಾಡ ಪಟ್ಟಣದ ಪ್ರಚಂಡ ಗ್ರಂಥಾಲಯವು ಸುಡಲ್ಪಟ್ಟಿತು; ಇಂಥ ಎಷ್ಟೋ ಹಟವಾದಿ ಮುಸಲ್ಮಾನ ದಾಳಿಗಾರರ ಹುಚ್ಚು ಹಟಮಾರಿತನಕ್ಕೆ ಹಿಂದೂ ಹಾಗೂ ಬೌದ್ಧ ಧರ್ಮಗ್ರಂಥಗಳು ತುತ್ತಾದವು; ಹಿಂದೂಜನರು ಇತಿಹಾಸ ಬರೆದಿಡಲಿಲ್ಲವೆಂದು ನಮ್ಮವರಾದ ಕೆಲವರು ಆಕ್ಷೇಪಿಸುವದುಂಟು. ಅಂಥವರನ್ನು ಕುರಿತು.

**ಮಿ. ಜೋ ಎಂಬುವರು ಬರೆಯುವದು**:— " ಹಿಂದೂಜನರಲ್ಲಿ ವಂಶ ಪರಂಪರೆಗಳ ಬರಹಗಳು ಇಲ್ಲವೆಂದೆನ್ನಲಾಗದು;"

**ಮಿ. ವಿಲ್ಸನ್ನ**:— " ಹಿಂದೂಜನರು ಎಂದೂ ಇತಿಹಾಸವನ್ನೇ ರಚಿಸಲಿಲ್ಲವೆನ್ನುವದು ತಪ್ಪು; "

**ಪ್ರೊ. ಹೀರನರು ಅನ್ನುವದು**:— ಹಿಂದೂಜನರಿಗೆ ಇತಿಹಾಸ ಬರೆಯುವದು ಗೊತ್ತಿತ್ತೆಂಬುದಕ್ಕೆ ರಾಜ ತರಂಗಿಣಿಯೇ ಸಾಕ್ಷಿ.

**ಕರ್ನಲ್ ಟಾಡರು ಅನ್ನುವದು**:— ಹಿಂದುಸ್ಥಾನಕ್ಕೆ ತಗಲಿದ ರಾಜಕೀಯ ರೋಗ, ಹಾಗೂ ಸ್ಥಿತ್ಯಂತರಗಳನ್ನು ಅಲ್ಲದೆ ಮುಸಲ್ಮಾನರ ದಾಳಿಗಳನ್ನು ಲಕ್ಷಿಸಿದರೆ, ಅಲ್ಲಿ ರಾಷ್ಟ್ರೀಯ ಇತಿಹಾಸ ಗ್ರಂಥಗಳ ಇಷ್ಟೊಂದು ಕೊರತೆ ಯಾಕಾಗಿರುವದೆಂಬುದು ಸ್ಪಷ್ಟವಾಗುವದು; ಇತಿಹಾಸ ಬರವಣಿಗೆಯ ಪದ್ಧತಿಯು ಹಿಂದುಸ್ಥಾನದಲ್ಲಿ ಅಷ್ಟೇ ಏಕೆ! ಅದಕ್ಕಿಂತ ಹಿಂದುಳಿದ ದೇಶಗಳಲ್ಲಿ ಕೂಡ ಪ್ರಾರಂಭದಿಂದ ವಾಡಿಕೆಯಲ್ಲಿದ್ದಿತು; ಅಂದಮೇಲೆ ಜಗತ್ತಿಗೆನೇ ಲಲಿತಕಲೆ, ಶಿಲ್ಪಕಲೆ, ಗಾಯನ, ಕಾವ್ಯ ಮುಂತಾದ ಅತ್ಯಂತ ಮಿಗಿಲಾದ ಶಾಸ್ತ್ರಗಳನ್ನು ಕಲಿಸಿದ ಹಿಂದುಸ್ಥಾನಕ್ಕೆ ಇತಿಹಾಸವನ್ನು ಬರೆದಿಡುವದು ಗೊತ್ತಿರಲಿಲ್ಲವೆನ್ನಲಿಕ್ಕಾದೀತೇ ? ಹಿಂದೂಸ್ಥಾನಕ್ಕೆ ಇತಿಹಾಸವಿಲ್ಲದಿದ್ದರೆ ಅದು ಅಬುಲ್ ಫಜಲ್ಲನ ತಲೆಯಲ್ಲಿಯೇ ಹೇಗೆ ಸೆಲೆಯೊಡೆಯಿತು ? ರಜಪುತಸ್ಥಾನದಲ್ಲಿ ವಿಜಯವಿಲಾಸ, ಸೂರ್ಯಪ್ರಕಾಶ, ಜಗದ್ವಿಲಾಸ, ರಾಜಪ್ರಕಾಶ, ಜಂ[illegible]ವಿಲಾಸ, ರಸಮಾಲಾ, ಮುಂತಾದ ಐತಿಹಾಸಿಕ ಹೊತ್ತಿಗೆಗಳಿರುವವು; ಪೃಥ್ವೀರಾಜನು ಬರೆದ ಚಂದನಮೀರ ಚರಿತ್ರೆಯಲ್ಲಿ ರಾಜತಂತ್ರ, ಸಾಮ್ರಾಜ್ಯ

ವನ್ನಾಳುವ ಉಪಾಯಗಳು ಹೇಳಲ್ಪಟ್ಟಿವೆ; ಮಹಾಭಾರತ ರಾಮಾಯಣ ಗಳಂಥ ಪ್ರಚಂಡ ಐತಿಹಾಸಿಕ ಗ್ರಂಥಗಳಂತೂ ಇದ್ದೇ ಇವೆ. ಇವೆ ಲ್ಲವು ಇತಿಹಾಸಗ್ರಂಥಗಳಲ್ಲದಿದ್ದರೆ ಮಹಾಕವಿಯಾದ ಶ್ರೀವೇದವ್ಯಾಸರು

**इतिहासप्रदीपेन मोहावरणघातिना।**
**लोकगर्भगृहं सर्वं यथावत् संप्रकाशितं ॥**

ಹೀಗೆಂದು ಸಂತೋಷಪಡುತ್ತಿರಲಿಲ್ಲ.

---

# ೧೬ ನೆಯ ಪ್ರಕರಣ

## ಧರ್ಮ

**" ಜಗತ್ತಿನಲ್ಲಿ ಮಹತ್ತರವಾದ ರಾಷ್ಟ್ರಧರ್ಮವನ್ನು ಸ್ಥಾಪಿಸಿ ದವರೆಂದರೆ ಆರ್ಯರೇ. ಜಗತ್ತಿನಲ್ಲಿ ಅವರದೇ ಒಂದು ದೊಡ್ಡ ಧರ್ಮವು. "**

**— ಪ್ರೊ. ಮ್ಯಾಕ್ಡೋನಾಲ್ಡರು**

ಸಂಸಾರದೊಳಗಿನ ನೊಂದ ಬೆಂದ ಜನರಿಗೆ ಧರ್ಮವೆಂಬುದು ದೊಡ್ಡ ದೊಂದು ಆಶ್ರಯ ಸ್ಥಾನವು; ಆದುದರಿಂದಲೇ, " ಮಾನವ ಸಮಾಜವನ್ನು ಒಂದೆಡೆಯಲ್ಲಿ ಕೂಡಿಸಲು ಧರ್ಮವೇ ಮುಖ್ಯಕಟ್ಟು ಆಗಿರುವದಾಗಿ ಪ್ರಖ್ಯಾತ ಇಂಗ್ಲೀಷ ತತ್ವಜ್ಞನಾದ ಬೇಕನ್ನನು ನುಡಿದಿರುವನು. ಮನುಷ್ಯರ ವ್ಯವಹಾರಗಳನ್ನೆಲ್ಲ ಸುಸೂತ್ರವಾಗಿ ನಡಿಸಲು ಅದೊಂದು ಪ್ರಬಲವಾದ ಸಾಧ ನವಾಗಿದೆ. ಧರ್ಮವು ಮುಖ್ಯವಾಗಿ ಆಚಾರ ಪ್ರಧಾನವಾಗಿರುವ ಮೂಲಕ, ಯಾವುದೊಂದು ವ್ಯಕ್ತಿಯ ಅಥವಾ ಜನಾಂಗದ ಸಂಸ್ಕೃತಿಯ ಬೆಲೆಗಟ್ಟಲು ಅದೇ ಕೊನೆಯ ಪ್ರಮಾಣವಾಗಿದೆ; ಹೀಗೆ ನಾವು ಜನಾಂಗದ ಜೀವವನ್ನು ಹಿಡಿದು ಪರೀಕ್ಷಿಸತೊಡಗಿದರೆ, ಸಂಸ್ಕೃತಿಯನ್ನು ಒರೆಗೆಹಚ್ಚಲು ಕಾರಣವಾ ಗುವ ಹಲವು ಅಂಗಗಳಲ್ಲಿ ಧರ್ಮವೂ ಒಂದು ಪ್ರಮುಖ ಅಂಗವಾಗುವದು. ಆರ್ಯರು ಧರ್ಮ ವಿಷಯದಲ್ಲಿ ಎಷ್ಟೊಂದು ಆಳವಾಗಿ ವಿಚಾರಿಸಿ, ಅದನ್ನು

ತಮ್ಮ ಜೀವಕ್ಕಿಂತ ಹೆಚ್ಚೆಂದೆನ್ನುವ ಮಟ್ಟಿಗೆ ಮಾಡಿಟ್ಟರು. ಮನುಷ್ಯನ ಜೀವನಕ್ಕೂ ಧರ್ಮಕ್ಕೂ ಆರ್ಯರು ಹಾಕಿದ ಕಗ್ಗಂಟು ನಮಗೆ ಈಗ ಅಹಸ್ಯವಾಗಿದ್ದರೂ, ಪಾಶ್ಚಾತ್ಯರು ಹೊಗಳುವದನ್ನು ಕೇಳಿಯಾದರೂ, ಭಾರತೀಯರಾದ ನಾವು ಧರ್ಮವನ್ನು ಇನ್ನು ಮುಂದಾದರೂ ಆದರಿಸಲಿಕ್ಕೆ ಬೇಕು.

ಪ್ರಾಚೀನ ಭಾರತೀಯರ ಧರ್ಮವು ಹೇಗಿತ್ತೆಂಬುದು ಈಗಿನ ಜನ ಸಾಮಾನ್ಯರ ನಡೆಯಿಂದ ನಿಶ್ಚಯಿಸಲಿಕ್ಕಾಗದು. ಹಿಂದೂಜನರ ಅಧ್ಯಾತ್ಮ ಪ್ರಧಾನವಾದ ಧರ್ಮವು ಈಗ ಜನಸಾಮಾನ್ಯರ ಜೀವವಿಲ್ಲದ ಸಂಪ್ರದಾಯದ ಕಟ್ಟಿಗೆ ಶಿಲುಕಿದಾಗಲೇ ಅವರ ಅಧೋಗತಿಯ ಕರೆಯ ಗೆರೆಯು ಕಣ್ಣಿಗೆ ಎದ್ದು ಕಾಣುವಷ್ಟು ಸ್ಪಷ್ಟವಾಯಿತು; ಮತ್ತು ಶಾಶ್ವತವಾದ ಸತ್ಯ ಮೊದಲಾದ ನಾವಿಲ್ಲದ ತತ್ವಗಳಿಂದ ಹಿಂದಕ್ಕೆ ಮೆರೆಯುವ ಭಾರತಭೂಮಿಯು ಈಗ ಕೇವಲ ಭೌತಿಕ ತತ್ವಗಳನ್ನು ಅವಲಂಬಿಸಿ ನಡೆಯಲಾರಂಭಿಸಿದೆ. ವೇದದಲ್ಲಿ ಹೇಳಿರುವಂತೆ, ದೇವರು, ಮನುಷ್ಯ, ಅವನ ಇರುವಿಕೆ, ದೇಹ ಮುಂತಾದ ವುಗಳ ಪರಸ್ಪರ ನಿತ್ಯಸಂಬಂಧವನ್ನು ತಿಳಿಯುವದೇ ವೇದಧರ್ಮದ ಜ್ಞಾನವು.

ನಿಜವಾದ ಧರ್ಮದ ಲಕ್ಷಣಗಳೆಂದರೆ, ಪ್ರಾಣಿಗಳಲ್ಲಿ ಭೂತದಯೆ, ಬಳಲುವ ಮಾನವರಬಗ್ಗೆ ಸಹಾನುಭೂತಿ, ಇವೆರಡೂ ಹಿಂದೂಜನರಲ್ಲಿ ಬೇರೂರಿವೆ.

"ಜಗತ್ತಿನೊಳಗಿರುವ ಪ್ರತಿಯೊಂದು ಪ್ರಾಣಿಗೆ ಮುಕ್ತಿಯಾಗುವಂತೆ ಪ್ರಯತ್ನಿಸಲು ನಾನು ಜೀವಂತನಾಗಿರುವೆನಲ್ಲದೆ, ನನ್ನೊಬ್ಬನಿಗೇ ಮೋಕ್ಷ ಲಭಿಸಬೇಕಂತಲ್ಲ" ಎಂದು ಕೈಗೆ ಬಂದ ಮುಕ್ತಿಪದವಿಯನ್ನು ಕಾಲಿ ನಿಂದೊದೆಯುವ ಬುದ್ಧನಂಥ ವಿಶ್ವವೀರರನ್ನೂ ನಾವು ಹಿಂದೂದೇಶದೊಳಗೆ ಕಾಣುವದುಂಟು.

ಹಿಂದೂಧರ್ಮದ ತತ್ವಗಳು ನಿತ್ಯವಾದವುಗಳು; ಅವಕ್ಕೆ ನಾಶವಿಲ್ಲ. ಹಿಂದೂ ಧರ್ಮವೆಂದರೆ ವಿಶ್ವಧರ್ಮವಾಗಿದೆ; ವಿಶ್ವದೊಳಗಿನ ಮಾನವಜಾತಿ ಯನ್ನಾಳಲು ಅದು ಯೋಗ್ಯವಾಗಿದೆ. ಬೇರೆ ಮತಗಳಂತೆ ಮನುಷ್ಯನ ಬಲ ಹೀನತೆಯನ್ನೂ, ಅಸಹಾಯ ಸ್ಥಿತಿಯನ್ನೂ ಹಿಂದೂಧರ್ಮವು ಒಪ್ಪುವ ದಿಲ್ಲ. ಮನುಷ್ಯನು ದೇವಾಂಶನೂ ಸ್ವತಂತ್ರನೂ ಇರುವನೆಂದು ಹಿಂದೂ

ಧರ್ಮದ ಪೂರ್ಣ ನಂಬಿಗೆಯಿರುವದರಿಂದ, ನೆಲಕ್ಕೆ ಬಿದ್ದವನನ್ನು ಹುರಿಗೊಳಿಸಿ ಮೇಲಕ್ಕೆತ್ತುವದಲ್ಲದೆ, ಅವನಿಗೆ ದಿವ್ಯದೃಷ್ಟಿಯನ್ನೂ ಕೊಡುವದು. ಈ ಕಾರ್ಯವು ಇನ್ನಾವ ಮತದಿಂದಲೂ ಸಾಧ್ಯವಿಲ್ಲ.

ಶಾಸ್ತ್ರಶುದ್ಧವಿರುವದೇ ಹಿಂದೂಧರ್ಮದ ಒಂದು ವಿಶಿಷ್ಟಲಕ್ಷಣವು; ಪ್ರಾಚೀನಕಾಲದಲ್ಲಿ ಧರ್ಮ ಹಾಗೂ ವಿಜ್ಞಾನ (Science) ಇವೆರಡೂ ಅಗಲದೇ ಇದ್ದವು. ಜಗತ್ತಿನೊಳಗಿನ ಬೇರೆ ಮತಗಳು ಆಧುನಿಕ ವಿಜ್ಞಾನ ಶಾಸ್ತ್ರಕ್ಕೆ (Modern Science) ಅನುಗುಣವಾಗಿಲ್ಲವೆಂದೂ ಹಿಂದೂ ಅಧ್ಯಾತ್ಮಶಾಸ್ತ್ರವು ಮಾತ್ರ ತತ್ವಶಾಸ್ತ್ರ ಹಾಗೂ ವಿಜ್ಞಾನಶಾಸ್ತ್ರಗಳ ತಳಹದಿಯ ಮೇಲೆ ನಿಂತಿರುವದೆಂದೂ ಪಾಶ್ಚಾತ್ಯರು ಒಪ್ಪುವರು.

**ಮ್ಯಾಕ್ಸಮುಲ್ಲರ ಸಾಹೇಬರು** ಶ್ರಾದ್ಧಪದ್ಧತಿಯನ್ನು ಕುರಿತು ಅನ್ನುವದು:— ಆರ್ಯರ ಪಿತೃಪೂಜೆಯು ಮತ್ತು ಪಿಂಡಪ್ರದಾನಪದ್ಧತಿಯು ಇವೆರಡೂ ಪುರಾತನರ ಪವಿತ್ರ ಲಕ್ಷಣಗಳಾಗಿವೆ. ಸತ್ತಂಥ ಹಿರಿಯರ ಸ್ಮರಣ ಮಾಡುವ ಪದ್ಧತಿಯೊಂದು ನಮ್ಮಲ್ಲಿ (ಕ್ರಿಶ್ಚನ್ನರಲ್ಲಿ) ಇರದಿರುವದು ಧಾರ್ಮಿಕ ದೊಡ್ಡ ಹಾನಿಯೆಂದು ನನ್ನ ನಂಬುಗೆ. ಸತ್ತಂಥ ತಾಯಿತಂದೆ ಹಾಗೂ ಅಣ್ಣತಮ್ಮಂದಿರಲ್ಲಿರುವ ಪ್ರೇಮವನ್ನು ತೋರ್ಪಡಿಸುವ ಈ ಧಾರ್ಮಿಕ ವಿಧಿಗಳೆಂದರೆ, ತಿಳಿಗೇಡಿತನದ ಲಕ್ಷಣಗಳೆಂದು ಕೆಲ ಜನಾಂಗದವರು ಎಣಿಸುತ್ತಿದ್ದರೂ, ಹಿಂದೂ ಜನರಲ್ಲಿ ವಿಶ್ವಾಸವೆಂಬುದೊಂದು ವಿಲಕ್ಷಣವೂ ಅವಿನಾಶಿಯೂ ಆದ ಜೀವಂತ ಶಕ್ತಿಯು ಹರಿಯುತ್ತಿದೆ. ಅದನ್ನಾರೂ ನಾಶವಾಗಗೊಡತಕ್ಕದ್ದಲ್ಲ."

ವೈದಿಕಧರ್ಮವು ಈಗೇನೋ ಕೇವಲ ಹಿಂದೂಗಳಿಗೆ ಸಂಬಂಧಿಸಿರುತ್ತದೆ; ಆದರೆ ಹಿಂದಕ್ಕೆ ಹಾಗಿದ್ದಿಲ್ಲ; ಅದು ವಿಶ್ವಧರ್ಮವಾಗಿತ್ತು; ಗ್ರೀಕರೂ, ಸಿಥಿಯನರೂ, ಹೂಣರೂ ವೈದಿಕರೊಳಗೆ ಸೇರಿದ್ದರು. ಇತ್ತೀಚೆ ದೊರೆತ ಶಿಲಾಲಿಪಿಗಳಿಂದ ಗ್ರೀಕರು ಸಹ ಹಿಂದೂಗಳಾಗಿದ್ದರೆಂದು ತಿಳಿಯುತ್ತದೆ.

ಹೂಣರು ತಮ್ಮ ನಾಯಕನಾದ ತೋರಮಾಣನನ್ನು ಮುಂದೆಮಾಡಿಕೊಂಡು ೬ ನೇ [illegible]ಮಾನದಲ್ಲಿ ದೊಡ್ಡ ಸಾಮ್ರಾಜ್ಯವನ್ನು ಸ್ಥಾಪಿಸಿದರು. ಇವರೇ ಮುಂ[illegible]ಬ್ರಾಹ್ಮಣಧರ್ಮವನ್ನು ಅಂಗೀಕರಿಸಿ, ಬ್ರಾಹ್ಮಣರ ಶ್ರೇಷ್ಠತ್ವವನ್ನು ಸ್ಥಾಪಿಸಲು [illegible]ಮಟ್ಟಿಗೆ ನೆರವಾದರು; ತೋರಮಾಣನ ತರು

ವಾಯು ಮಿಹಿರಕುಲನು ಬ್ರಾಹ್ಮಣಧರ್ಮವನ್ನು ಕಾಪಾಡಿ ಬುದ್ಧರ ಹಾವಳಿಯನ್ನು ಕಡಿಮೆಮಾಡಿದನು. ಈತನು ಶಿವೋಪಾಸಕನಿದ್ದನು. ಹ್ಯುವೆನಸಂಗನಂತೂ ಮಿಹಿರಕುಲನು ಬುದ್ಧರ ಸ್ತೂಪಗಳನ್ನೂ ಸಂಘಾರಾಮಗಳನ್ನೂ ಹಾಳುಮಾಡಿದನೆಂದೂ, ಅಸಂಖ್ಯಾಕರಾದ ಬುದ್ಧರನ್ನು ಕೊಲೆ ಮಾಡಿಸಿದನೆಂದೂ ಹೇಳಿರುವನು. ಕಲ್ಹಣನು ತನ್ನ ರಾಜತರಂಗಿಣಿಯಲ್ಲಿ "ದರದದಿಂದಲೂ, ಮ್ಲೇಂಛರಿಂದಲೂ ನಾಶಗೊಳಿಸಲ್ಪಟ್ಟ ಧಾರ್ಮಿಕ ಸಂಪ್ರದಾಯಗಳನ್ನು ಮಿಹಿರಕುಲನು ತಿರಿಗಿ ಸ್ಥಾಪಿಸಿದನು" ಎಂದು ಬರೆದಿದ್ದಾನೆ.

**ಡಾ. ಅನಿಬೆಝಂಟರು** ಕಲಕತ್ತೆಯಲ್ಲಿ ಕೊಟ್ಟ ಉಪನ್ಯಾಸದಲ್ಲಿ ಅನ್ನುವದು:—ಹಿಂದೂದೇಶವು ಧರ್ಮದ ತಾಯಿನಾಡು. ಧರ್ಮ ಮತ್ತು ವಿಜ್ಞಾನಶಾಸ್ತ್ರಗಳೆರಡೂ ಅದರಲ್ಲಿ ಒಳಗೊಂಡಿವೆ; ಇನ್ನು ಮುಂದಾದರೂ ಹಿಂದುಸ್ಥಾನವೇ ಜಗತ್ತಿಗೆ ಅಧ್ಯಾತ್ಮಧರ್ಮದ ತಾಯಿಯಾಗುವದು.

ಒಂನಾನೊಂದು ಕಾಲಕ್ಕೆ ಆರ್ಯರು ಜಗತ್ತಿನಲ್ಲಿಯ ಪ್ರತಿಯೊಂದು ಪ್ರದೇಶವನ್ನು ಗೆದ್ದು ಅಲ್ಲಿ ಒಕ್ಕಲಾಗಿದ್ದರೆಂಬುದು ಸಿದ್ಧವಾಗಿದೆ; ಹಾಗೆಯೇ ಬೇರೆಬೇರೆ ಜನಾಂಗದವರು ಆರ್ಯಾವರ್ತದಿಂದಲೇ ಧರ್ಮವನ್ನು ಪಡೆದರೆಂಬದೂ ತಿಳಿದು ಬರುವಂತಿದೆ. ಈಗ ಕೂಡ ಜಗತ್ತಿನಲ್ಲಿರುವ ಅರ್ಧಕರ್ಧ ಜನರು ಹಿಂದುಸ್ಥಾನದೊಳಗೆ ಹುಟ್ಟಿದ ವೇದಧರ್ಮದ ಅನುಯಾಯಿಗಳೇ ಇದ್ದಾರೆ. ಜಗತ್ತಿನ ಜನಸಂಖ್ಯೆಯು ಒಂದು ಅಬ್ಜವೆಂದು ಇಟ್ಟುಕೊಂಡರೆ, ೫೩ ಕೋಟಿ ಜನರೇ ಮೊದಲು ಹಿಂದುಗಳೂ ಬೌದ್ಧರೂ ಆಗುವರು.

ಕ್ರಿಸ್ತ ಹಾಗೂ ಹಿಂದೂಧರ್ಮಗಳ ತುಲನೆಮಾಡಿ **ಕಾವುಂಟೆಸ್ ಜರ್ನೆ** ಎಂಬುವರು ಬರೆಯುವದು:—ಕ್ರಿಶ್ಚನ್ ಧರ್ಮದಿಂದ ಮನುಷ್ಯನ ಸಂದೇಹವು ದೂರಾಗುವದಿಲ್ಲ ಅಥವಾ ಅವನು ನಿರ್ಭಯನಾಗುವದಿಲ್ಲ; ಆದರೆ ಉಪನಿಷತ್ತುಗಳನ್ನೋದಿದರೆ ಮಂಗನಂಥ ಮನಸು ತೃಪ್ತಿಯೊಡೆದು ಶಾಂತವಾಗುತ್ತದೆ. ಹಿಂದೂಜನರ ಕರ್ಮವಾದವನ್ನು ಓದಿದರೆ ಸಂಸಾರದೊಳಗೆ ಕಾಣುವ ಸುಖದುಃಖ ಮತ್ತು ಪಾಪಪುಣ್ಯಗಳ ತೊಡಕಿನ ಸಂದೇಹವು ತನ್ನಾರೆ ನಿವಾರಣೆಯಾಗುತ್ತದೆ. ಹಿಂದೂಧರ್ಮದಿಂದ ತೃಪ್ತರಾದವರು ಕ್ರಿಸ್ತಮತವನ್ನು ಕಣ್ಣೆತ್ತಿಸಹ ನೋಡರು."

ಕ್ರಿಸ್ತಮತವೂ ಕ್ರಿಸ್ತನೀತಿಶಾಸ್ತ್ರವೂ ಹಿಂದೂಧರ್ಮದಿಂದಲೇ ಹುಟ್ಟಿ

ದವೆಂಬುದು ಇತ್ತೀಚೆ ಅನೇಕ ವಿದ್ವಾಂಸರು ಸಿದ್ಧ ಪಡಿಸತೊಡಗಿರುವರು. ಹಿಂದೂ ಧರ್ಮದಿಂದ ಮನಸ್ಸು ಸಂತುಷ್ಟವಾಗದಿದ್ದರೆ ಇನ್ನಾವ ಧರ್ಮ ದಿಂದಲೂ ಶಾಂತವಾಗದೆಂದು ಅನೇಕ ಗ್ರಂಥಕಾರರು ಕಡು ಖಂಡಿತವಾಗಿ ಹೇಳಿರುವರು.

ಹಿಂದೂಜನರು ಹಿಂದಕ್ಕೆ ಇಂಥ ದೇಶದಲ್ಲಿ ಒಕ್ಕಲಾಗಿದ್ದರು; ಇಂಥ ದೇಶದಲ್ಲಿರಲಿಲ್ಲವೆಂಬುವ ಮಾತು ಸಲ್ಲದು; ಅಷ್ಟೇ ಅಲ್ಲದೆ ಅವರು ಅನೇಕ ದೇಶಗಳನ್ನೂ ಗೆದ್ದರು. ಪ್ರಾಚೀನ ಜನಾಂಗಗಳ ಧರ್ಮಗಳಿಗೆ ಆರ್ಯಾ ವರ್ತವೇ ತವರುಮನೆಯಾಗಿತ್ತು; ಈಗ್ಯೂ ಮಾನವ ಜನಸಂಖ್ಯೆಯೊಳಗಿನ ಅರ್ಧಕರ್ಧ ಜನರು ಹಿಂದುಸ್ಥಾನದಲ್ಲಿ ಹುಟ್ಟಿದಂಥ ಧರ್ಮದ ಅನುಯಾಯಿ ಗಳೇ ಇರುವರು.

**ರೆವ್ಹರಂಡ ವಾರ್ಡ:**— “ಹಿಂದೂಜನರ ತತ್ವಶಾಸ್ತ್ರ ಹಾಗೂ ಧರ್ಮ ಅವೆರಡೂ ಜಗತ್ತಿನ ಬಹು ಭಾಗವನ್ನು ಆಳುತ್ತಿವೆ; ಜಪಾನ, ಚೀನ, ತಾರ್ತರಿ, ಬ್ರಹ್ಮದೇಶ, ಸಯಾಮ, ಸಿಲೋನ ದ್ವೀಪಗಳಲ್ಲಿರುವ ಧರ್ಮಕ್ಕೆ ಹಿಂದೂಧರ್ಮವೇ ಮೂಲವು.

ವಾಡಿಕೆಯಾಗಿ ಹಳೆಯ ಧರ್ಮ–ಮತ–ಪಂಥಗಳಿಂದಲೇ ಹೊಸ ಧರ್ಮಗಳು ಹುಟ್ಟುವವು; ಈ ಮೇರೆಗೆ ಹಳೆಯ ಧರ್ಮ–ಮತಗಳೆಂದರೆ, ಹೊಸ ಧರ್ಮದ ತಾಯಿತಂದೆಗಳು; ಕ್ರಿಸ್ತೀ ಧರ್ಮವು ಮೋಸೆಸದ ಮಂತ್ರ ಗಳಿಂದ ಹುಟ್ಟಿತು; ಮೋಸೆಸವು ಇಜಿಪ್ತರಿಂದ ಹುಟ್ಟಿತು; ಇಜಿಪ್ತರು ಹಿಂದೂ ದೇಶದಿಂದ ತಮ್ಮ ಧರ್ಮವನ್ನೆತ್ತಿಕೊಂಡಿದ್ದರು; ಅದರಂತೆಯೇ ಮಹಮ್ಮದೀಯ ಧರ್ಮವಾದರೂ ಮೋಸೆಸ್, ಕ್ರಿಸ್ತಿ, ಹಾಗೂ ಪಾರ್ಸಿ ಧರ್ಮಗಳ ಬೆರಕೆ ಇರುವದೆಂದು ಕೆಲವು ಲೇಖಕರ ಮತ. ಬುದ್ಧ ಧರ್ಮವಂತೂ ಬ್ರಾಹ್ಮಣರ ಜೀವವಿಲ್ಲದ ಧರ್ಮದ ವಿರುದ್ಧವಾಗಿ ಹೊರಟಂಥ ಬಂಡಾಯವೆಂದು ಎಲ್ಲರೂ ಒಪ್ಪುವರು; ಜೈನ ಧರ್ಮವಾದರೂ ಹಿಂದೂಧರ್ಮದ ಮರಿಯೇ ಆಗಿದೆ.

**ಪ್ರೋ. ರಾಯಿಸ್ ಡೆವ್ಹಿಡ್ಸರು:**— “ಪದ್ಧತಿಯನ್ನು ನೋಡಿದರೆ, ಬುದ್ಧ ಧರ್ಮವು ಹಿಂದೂಧರ್ಮವನ್ನೇ ಹೋಲುತ್ತದೆ; ಸ್ವತಃ ಬುದ್ಧನೇ ತನ್ನ ಆಯುಷ್ಯವನ್ನೆಲ್ಲ ಹಿಂದೂ ಪದ್ಧತಿಯಿಂದಲೇ ಕಳೆದನು.”

**ಪ್ರೊ. ವೆಬರರು:—** "ಬುದ್ಧಧರ್ಮವು ಸುಧಾರಿಸಿದ ನೀತಿಪ್ರಧಾನ ಹಿಂದೂಧರ್ಮವೇ ಇರುವದು. ಬುದ್ಧನ ಉಪದೇಶದೊಳಗೆ ಹೊಸದೇನೂ ಇಲ್ಲ; ತಿರಿಗಿ ನೋಡಿದರೆ, ಬ್ರಾಹ್ಮಣಧರ್ಮಕ್ಕೆ ಅದು ಬಲು ಮಟ್ಟಿಗೆ ಹೋಲುವದು;"

**ಪರಧರ್ಮದಲ್ಲಿಯ ಹಿಂದೂ-ಕುರುಹುಗಳು:—** ಹಿಂದೂ ಧರ್ಮದ ಕುರುಹುಗಳು ಈಗ್ಯೂ ಪರದೇಶಗಳಲ್ಲಿ ಕಾಣುತ್ತಿವೆ. ಇಜಿಪ್ತರ ಶ್ರೇಷ್ಠವಾದ ದೇವರ ಹೆಸರು ಅಮ್ಮನ್ ಎಂಬುದಿದ್ದು, ಅದು ಹಿಂದೂ ಓಂಕಾರಕ್ಕೆ ಹೊಂದುತ್ತದೆ. ಸಿಕಂದರ ಬಾದಶಹನು ಇಜಿಪ್ತಕ್ಕೆ ಹೋದಾಗ ಅಲ್ಲಿಯ ಗುಡಿಗಳಲ್ಲಿ ಶಿವನ ಮೂರ್ತಿಯನ್ನು ಕಂಡ ಸಂಗತಿಯು ಪ್ರಸಿದ್ಧ ವಿದೆ. ಇಜಿಪ್ತರ ವಿಶ್ವಸೃಷ್ಟಿಯುತ್ಪತ್ತಿಶಾಸ್ತ್ರವು ಹಿಂದೂಗಳಂತಿದೆ; ಗ್ರೀಕರ ಫೀನ್ಸನಿಗೆ ( ಬ್ರಹ್ಮ ) ಮೂರು ತಲೆಗಳಿದ್ದವೆಂದೂ, ಅವನೇ ಸೃಷ್ಟಿ ನಿರ್ಮಿಸಿ ದನೆಂದೂ ಹೇಳಿಯದೆ. ಅದರಂತೆಯೇ, ಗ್ರೀಕರ, ಇಜಿಪ್ತರ, ಅಸೀರಿ ಯನರ ಪುರಾಣಗಳಿಗೆಲ್ಲ ಹಿಂದೂ ಪುರಾಣಗಳೇ ಆಧಾರಗಳು. ಗ್ರೀಕರ ಹೋಮರ ಕವಿಯು ಬರೆದ ಈಲಿಯಡ್ ಕಾವ್ಯಕ್ಕೆ ವೇದಗಳೇ ಆಧಾರ ವೆಂದು ಒಂದೆಡೆಯಲ್ಲಿ ಮ್ಯಾಕ್ಸಮುಲ್ಲರರು ಬರೆದಿರುವರು. ಗ್ರೀಕರ ದೇವ-ದೇವತೆಗಳ ಹೆಸರುಗಳನ್ನು ಸೂಕ್ಷ್ಮವಾಗಿ ನೋಡಿದರೆ, ಅವು ಹಿಂದೂ ದೇವತೆಗಳ ಹೆಸರುಗಳೆಂದೇ ಎಣಿಸಬಹುದು. ಉದಾ:- ಉರಣಸ್-ವರುಣ, ಜನುಸ್-ಗಣೇಶ, ವ್ಹಲಕನ್-ವಿಶ್ವಕರ್ಮ, ಸಿರಿಸ್-ಶ್ರೀ. ಮುಂತಾದವು; ಹೋಮರನ ಅನೇಕ ಕಾವ್ಯಗಳಿಗೆ ರಾಮಾಯಣ ಮಹಾ ಭಾರತಗಳೇ ಉಗಮಗಳು. ಒಟ್ಟಾರೆ, ಹಿಂದೂ ದೇವತೆಗಳೇ ಒಂದಿಲ್ಲೊಂದು ಬಗೆಯಿಂದ ಇಡೀ ಜಗತ್ತಿನ ಸಂಸ್ಕೃತಿಯಲ್ಲಿ ಸೇರಿಕೊಂಡು ಬೇರೆ ಬೇರೆ ಹೆಸರುಗಳನ್ನು ಪಡೆದಿರುವವೆನ್ನಲು ಏನೂ ಅಡ್ಡಿಯಿಲ್ಲ.

---

# ೧೭ ನೆಯ ಪ್ರಕರಣ

## ತತ್ವಜ್ಞಾನ

**ಯುರೋಪಿಯರ ಅತ್ಯುಚ್ಚ ತತ್ವಶಾಸ್ತ್ರ, ಗ್ರೀಕರ ಬುದ್ಧಿಯು ಧ್ಯೇಯವಾದ ಇವೆಲ್ಲವು ಭಾರತೀಯರ ತತ್ವಶಾಸ್ತ್ರವೆಂಬ ಮಧ್ಯಾಹ್ನ ಕಾಲದ ಸೂರ್ಯನಮುಂದೆ ಈಗೋ, ಇನ್ನೊಂದು ಕ್ಷಣಕ್ಕೋ ಆರುವ ಪಣತಿಯ ದೀಪಗಳಂತೆ ಕಾಣುತ್ತವೆ.**

—ಮಿ. ಸ್ಲೆಜೆಲ್ಲರು

ಜಗತ್ತನ್ನಾಳುವ ಶಾಸ್ತ್ರವೇ ತತ್ವಶಾಸ್ತ್ರವು; ಈ ಶಾಸ್ತ್ರದ ತತ್ವಗಳು ಜಗತ್ತಿಗೆ ಬಹು ಮಾರ್ಗದರ್ಶಕವಾಗಿರುತ್ತವೆ. ಮನುಷ್ಯನ ಮನಸ್ಸಿಗೆ ನಿಲುಕದ ಈ ತತ್ವಶಾಸ್ತ್ರಕ್ಕೆ ಜಗವೇ ಬಾಗುವದು; ಅದರ ಮುಂದೆ ಎಲ್ಲ ಆಟಗಳು ಕುಂಟಾಗುವವು. ಮಿಕ್ಕ ಶಾಸ್ತ್ರಗಳ ಬಾಯಿ ಕಟ್ಟುವ ಹಾಗೂ ಕತ್ತಿಯ ಹದನಾದ ಮೊನೆಯನ್ನು ಮೊಂಡಗೊಳಿಸುವ ಸಾಮರ್ಥ್ಯವು ತತ್ವಶಾಸ್ತ್ರದಲ್ಲಿದೆ; ಆದುದರಿಂದ ಶಾಸ್ತ್ರಗಳಲ್ಲಿ ತತ್ವಶಾಸ್ತ್ರವೇ ಮೇಲಾದುದೆಂದು ಪ್ರಸಿದ್ಧಿಯಿದೆ.

ಶ್ರೇಷ್ಠವಾದ ಜನಾಂಗವೇ ಶ್ರೇಷ್ಠವಾದ ತತ್ವಜ್ಞರನ್ನೂ, ತತ್ವ ಸಿದ್ಧಾಂತಗಳನ್ನೂ ಹುಟ್ಟಿಸಬಹುದೆಂಬುವ ಮಾತು ನಿಜವಿದ್ದುದೇ ಆದರೆ, ಹಿಂದೂಜನಾಂಗವು ನಿಃಸಂಶಯವಾಗಿ ಮಿಗಿಲಾದ ಜನಾಂಗವೆನ್ನಲಿಕ್ಕೇನೂ ಅನುಮಾನವಿಲ್ಲ. ಈ ಬಗ್ಗೆ ಪ್ರೊ. ಮ್ಯಾಕ್ಸಮುಲ್ಲರರು ಅನ್ನುವದು:—ದೇಶದಲ್ಲಿ ಶಾಂತಿಕ್ಷೇಮಗಳು ನೆಲೆಗೊಳ್ಳದೆ, ದೇಶವು ವಿದ್ಯಾ, ಬುದ್ಧಿ, ವಾಙ್ಮಯ, ಸಂಪತ್ತಿ, ಹಾಗೂ ನಾಗರೀಕತೆ ಇವುಗಳಲ್ಲಿ ಅಭಿವೃದ್ಧಿ ಹೊಂದದೆ, ತತ್ವಜ್ಞರು ಹುಟ್ಟರು; ಹಿಂದೂದೇಶವೆಂದರೆ, ತತ್ವಜ್ಞರ ಜನಾಂಗವೆಂದ ಬಳಿಕ, ಅದು ಬಂದಾನೊಂದು ಕಾಲಕ್ಕೆ ಎಷ್ಟು ಸುಧಾರಣೆಯ ಶಿಖರಕ್ಕೆ ಮುಟ್ಟಿತ್ತೆಂಬುದನ್ನು ವಾಚಕರೇ ಊಹಿಸಲಿ!

**ಪ್ರೊ. ಗೋಲ್ಡಸ್ಟಕರು:—** "ಉಪನಿಷತ್ತುಗಳಲ್ಲಿ ಎಲ್ಲ ತತ್ವ ಸಿದ್ಧಾಂತಗಳು ಸಂಕ್ಷೇಪವಾಗಿ ಅಡಕವಾಗಿರುತ್ತವೆ."

ಪೂರ್ವಕಾಲದಲ್ಲಿ ದೂರದೂರಿನ ದೇಶದವರು ಜ್ಞಾನಸಂಪಾದನೆಗಾಗಿ, ಮತ್ತು ತತ್ವಶಾಸ್ತ್ರದ ಅಧ್ಯಯನಕ್ಕಾಗಿ ಹಿಂದುಸ್ಥಾನಕ್ಕೆ ಬರುತ್ತಿದ್ದರು; ಈ

ಕಾರ್ಯವು ಅನೇಕ ಶತಮಾನಗಳವರೆಗೆ ಅಖಂಡವಾಗಿ ನಾಗಿತ್ತು. ತತ್ವ ಶಾಸ್ತ್ರದೊಳಗಂತೂ ಗ್ರೀಕರಿಗೆ ಹಿಂದೂಜನರೇ ಗುರುಗಳು. ಪ್ರಖ್ಯಾತ ಗ್ರೀಕತತ್ವಜ್ಞನಾದ ಪಾಯಥಾಗೋರಾಸನು ತತ್ವಶಾಸ್ತ್ರ ಕಲಿಯಲಿಕ್ಕೆಂದೇ ಹಿಂದುಸ್ಥಾನಕ್ಕೆ ಬಂದು, ಪುನರ್ಜನ್ಮದ ಸಿದ್ಧಾಂತವನ್ನು ತಿಳಿದುಕೊಂಡನು; ಈತನಂತೆಯೇ ಥೇಲ್ಸ ಡಿಮಾಕ್ರಿಟಸ್ ಮುಂತಾದವರು ಬಂದಿದ್ದರೆಂದೂ ಇಲ್ಲಿಂದ ಹೋದನಂತರವೇ ಅವರು ಹೆಸರುವಾಸಿಗಳಾದರೆಂದೂ ತಿಳಿಯುತ್ತದೆ. ಅನೇಕ ಶತಮಾನಗಳವರೆ ಗ್ರೀಕರಂತೂ ಹಿಂದುಸ್ಥಾನವೆಂದರೆ ಮೋಕ್ಷಭೂಮಿಯೆಂದು ತಿಳಿದುದರಿಂದ ನಿಜವಾದ ಜ್ಞಾನಸಂಪಾದನೆಗಾಗಿ ಪೂರ್ವಕ್ಕೆ ಧಾವಿಸುತ್ತಿದ್ದರು. ಡಿಮೆಟ್ರಿಯುಸ್ ಎಂಬುವನು ಆರ್ಯರ ತತ್ವ ಶಾಸ್ತ್ರದ ಹುಚ್ಚುಹಿಡಿದವನಾಗಿ ತನ್ನ ಮನೆ–ಮಾರು–ಆಸ್ತಿಯನ್ನೆಲ್ಲ ಒಬ್ಬ ಸ್ನೇಹಿತನಿಗೊಪ್ಪಿಸಿ, ಹಿಂದುಸ್ಥಾನದೊಳಗಿನ ಬ್ರಾಹ್ಮಣರ ಸಹವಾಸದಲ್ಲಿ ಉಳಿಗಾಲವನ್ನು ಕಳೆಯಬೇಕೆಂದು ೨ನೇ ಶತಮಾನದ ಮಧ್ಯದಲ್ಲಿ ತೆರಳಿದನೆಂದೂ ಒಂದೆಡೆಯಲ್ಲಿ ಬರೆಯಲ್ಪಟ್ಟಿದೆ.

ಇನ್ನು, ದರ್ಶನಗಳ ಬಗ್ಗೆ ಯಾವ ಯಾವ ಗ್ರಂಥಕಾರರು ಏನು ಉದ್ಗಾರ ತೆಗೆದಿರುವರೆಂಬುದನ್ನಷ್ಟು ನೋಡುವಾ! “ಗೌತಮರು ಬರೆದಿರುವ **ನ್ಯಾಯಶಾಸ್ತ್ರವೆಂದರೆ,** ತರ್ಕಬದ್ಧ ಧ್ಯೇಯವಾದವೇ ಸರಿ! ಎಂದು ಜರ್ಮನ್ ಪಂಡಿತನಾದ ಸ್ಲೆಜೆಲ್ಲನು ನುಡಿದಿರುವನು. ಇನ್ನು ತರ್ಕ ಪದ್ಧತಿಯನ್ನು ಕುರಿತು ಮ್ಯಾಕ್ಸಡಂಕರನು ಅನ್ನುವದು:— ಹಿಂದೂ ಜನರು ಬರೆದ ತರ್ಕಗ್ರಂಥಗಳು ಆಧುನಿಕ ಗ್ರಂಥಗಳಿಗಿಂತ ಗುಂಜಿತೂಕ ಮೇಲಾಗಿವೆಯೇ ಹೊರ್ತು ಕಡಿಮೆಯಿಲ್ಲ. ನ್ಯಾಯಶಾಸ್ತ್ರವನ್ನು ಸ್ವತಂತ್ರವಾಗಿ ವಿಚಾರಿಸಿ ಬರೆದವರೆಂದರೆ, ಇಡೀ ಜಗತ್ತಿನಲ್ಲಿ ಎರಡೇ ಜನಾಂಗದವರು; ಅವರಲ್ಲಿ ಹಿಂದೂಗಳು ಮುಂದಾಳುಗಳು; ಗ್ರೀಕರು ಅವರ ಹಿಂದಾಳುಗಳು

**ವೈಶೇಷಿಕ:—** ವೈಶೇಷಿಕವು ನ್ಯಾಯಶಾಸ್ತ್ರಕ್ಕೆ ಪೂರಕವೆಂದೆಣಿಸಲ್ಪಟ್ಟಿದೆ. ನಿಜವಾಗಿ ವಿಚಾರಮಾಡಿದರೆ, ಅದು ನ್ಯಾಯವನ್ನೇ ಬೆಳಿಸಿ ಬರೆದ ಶಾಸ್ತ್ರವಾಗಿದೆಂದರೂ ಅತ್ಯುಕ್ತಿಯಾಗದು. ಸಂಸ್ಕೃತದಲ್ಲಿ ಇದೆರಡಕ್ಕೂ ‘ಮನನ–ಶಾಸ್ತ್ರ’ ವೆಂದು ಹೆಸರು. ಇದರ ಸ್ಥಾಪಕನಾದ ಕಣಾದನು

ಸೃಷ್ಟಿಯನ್ನು ಆರು ಬಗೆಯಾಗಿ ವಿಂಗಡಿಸಿದನು. ಮುಂದೆ ಇವುಗಳಲ್ಲಿ ಇನ್ನೊಂದನ್ನು ಸೇರಿಸಿ ಏಳು ಮಾಡಿದರು.

**ಡಾ. ರೋಆರ:—** ಭಾಷಾಪರಿಚ್ಛೇದವೆಂಬುದಕ್ಕೆ ಪ್ರಸ್ತಾವನೆಯನ್ನು ಬರೆಯುವಾಗ ಮೇಲಿನ ಡಾಕ್ಟರ ಸಾಹೇಬರು ಕಣಾದನ ಅಣುವಾದಕ್ಕೂ ಡಿಮಾಕ್ರಿಟಸನ ವಾದಕ್ಕೂ ತುಲನೆ ಮಾಡಿ, ಕಣಾದನ ತತ್ವವೇ ಮೇಲಾದುದೆಂದು ಅಭಿಪ್ರಾಯಪಟ್ಟಿದ್ದಾರೆ.

**ಸಾಂಖ್ಯ:—** ಈ ಶಾಸ್ತ್ರದ ವಿಷಯವಾಗಿ ಮಿಸೆಸ್ ಮ್ಯಾನಿಂಗ ಎಂಬುವರು ಅನ್ನುವದು:— ಸಾಂಖ್ಯಶಾಸ್ತ್ರವು ಜಗತ್ತಿನ ಗೂಢ ತತ್ವವನ್ನು ಹುಡುಕಲು ಬಹುಮಟ್ಟಿಗೆ ಪ್ರಯತ್ನಿಸಿದೆ. ಒಂದೆಡೆಯಲ್ಲಿ ಅದು ಕ್ಷಣಿಕ ಪ್ರಪಂಚದ ವೈಯರ್ಥ್ಯವನ್ನು ತೋರಿಸಿದೆ; ಮತ್ತೊಂದೆಡೆಯಲ್ಲಿ ಅವಿನಾಶಿಯಾದ ಆತ್ಮನನ್ನಿಟ್ಟುಕೊಂಡಿದೆ. ಕಪಿಲರು ಸಿದ್ಧಪಡಿಸಿದ ವಿನಾಶಿಯಾದ ಜಗತ್ತಿನ ಬಗೆಯನ್ನು ಕಂಡು ವಿಲ್ಸನ್ ಬೈರ್ಘುಂಟ್ಟೈನ ಮುಂತಾದವರು ಬೆರಗುಗೊಂಡರು.

**ಪ್ರೊ. ಮ್ಯಾಕ್‌ಡೋನೆಲ್ಲರು ಅನ್ನುವದು:—** ಜಗತ್ತಿನ ಇತಿಹಾಸದೊಳಗೆ ಎಲ್ಲಕ್ಕೂ ಮೊದಲು ಸಾಂಖ್ಯರೇ ಮನಸ್ಸಿನ ಪೂರ್ಣ ಸ್ವಾತಂತ್ರ್ಯವನ್ನು ಸಿದ್ಧಪಡಿಸಿದರು; ಮತ್ತು ಅದರ ತೊಡಕುಗಳನ್ನು ಬುದ್ಧಿಯ ಸಹಾಯದಿಂದ ಬಗೆಹರಿಸಲು ಪ್ರಯತ್ನಿಸಿದರು.

**ಯೋಗ:—** ಈ ಶಾಸ್ತ್ರವು ಜಗತ್ತಿನಲ್ಲಿಯೇ ತೀರ ಹೊಸದಿದ್ದು, ಇದು ಬೇರೆ ಯಾವ ದೇಶದ ಜನರಿಗೂ ಇನ್ನೂ ಪ್ರಾಪ್ತವಾಗಿಲ್ಲ. ಆರ್ಯರ ಬೌದ್ಧಿಕ ಹಾಗೂ ಆಧ್ಯಾತ್ಮಿಕ ವಿಕಾಸವು ಎಷ್ಟು ಶಿಖರಕ್ಕೇರಿತೆಂಬುದಕ್ಕೆ ಯೋಗಶಾಸ್ತ್ರವೇ ಪ್ರಮಾಣ. ಯೋಗಜ್ಞಾನವಿಲ್ಲದೆ ಮನುಷ್ಯನಲ್ಲಿ ದೇವರು ಇಟ್ಟಿರುವ ಅದ್ಭುತ ಹಾಗೂ ಅತ್ಯಂತ ಗೂಢ ಶಕ್ತಿಗಳ ಕಲ್ಪನೆಬಾರದು. ಮಾನವೀ ಹೃತ್ಕೋಶದ ಅಗಾಧವಾದ ಸಾಗರದೊಳಗೆ ಎಂತೆಂತಹ ಗೂಢ ತತ್ವ ರತ್ನಗಳಿರುವವೆಂಬುದು ಬುದ್ಧಿಗೆ ನಿಲುಕದು; ಅಂದ ಮೇಲೆ ಅಚಿಂತ್ಯನಾದ ಭಗವಂತನನ್ನು ತಿಳಿಯುವದೆಂತು ? ಯೋಗಜ್ಞಾನವಾಗದೆ ನೀತಿಶಾಸ್ತ್ರದ ಗುಟ್ಟು ತಿಳಿಯದು. ಮನುಷ್ಯನಲ್ಲಿ ಅಡಗಿರುವ ಅನಂತವಾದ ದೈವಿಕ ಗೂಢಶಕ್ತಿಗಳನ್ನು ಬೈಲಿಗೆಳೆಯಲು ಯೋಗವೊಂದೇ ಮೇಲಾದ

ದಾರಿಯು. ಸೀಖರ ಇತಿಹಾಸವೆಂಬ ಪುಸ್ತಕದಲ್ಲಿ **ಡಾ. ಮ್ಯಾಗ್ರೆಗಾರ** ಎಂಬುವರು ಅನ್ನುವದು:— ೧೮೩೭ ರಲ್ಲಿ ಒಬ್ಬ ಫಕೀರನು ಪೆಟ್ಟಿಗೆಯಲ್ಲಿ ಕುಳಿತುಕೊಂಡು ಅನ್ನ–ನೀರಿಲ್ಲದೆ ಬೇಕಾದಷ್ಟು ದಿನಗಳವರೆಗೆ ನೆಲದೊಳಗೆ ಹುಗಿದುಕೊಂಡಿರುತ್ತಿದ್ದ ಸಂಗತಿಯನ್ನು ಲಾಹೋರದಲ್ಲಿ ಕೇಳಿದ್ದೆ; ಈತನು ಅದೇ ತಾನೇ ಲಾಹೋರಕ್ಕೆ ಬಂದಿದ್ದ; ಇದನ್ನು ಪರೀಕ್ಷಿಸಲೋಸುಗ ರಣಜಿತಸಿಂಗನು ಆ ಫಕೀರನನ್ನು ಕರೆಯಿಸಿ, ಅವನನ್ನು ಒಂದು ಪೆಟ್ಟಿಗೆಯಲ್ಲಿ ಮುಚ್ಚಿ ಹಗೆಯಲ್ಲಿಡಿಸಿದನು; ಅಷ್ಟೇ ಅಲ್ಲದೆ ೪೦ ದಿನಗಳವರೆಗೆ ಕಾವಲವಿಡಿಸಿದನು; ತರುವಾಯ ರಣಜಿತಸಿಂಗನು ತನ್ನ ಸರದಾರರೊಡನೆ ಅಲ್ಲಿಗೆ ಬಂದು ಆ ಫಕೀರನನ್ನು ಹೊರತೆಗೆಯಿಸಿ, ನೋಡುತ್ತಾನೆ, ಫಕೀರನು ಎಲ್ಲರಂತೆ ಸುಖವಾಗಿ ಮಾತನಾಡತೊಡಗಿದನು; ಇದನ್ನು ನೋಡಿ ರಣಜೀತಸಿಂಗನಿಗೆ ಆನಂದವು ಉಕ್ಕೇರಿ ಅದಕ್ಕಾಗಿ ಅವನು ತೋಫುಗಳನ್ನು ಹಾರಿಸಹೇಳಿದನು; ಅಲ್ಲದೆ ತತ್‌ಕ್ಷಣವೇ ತಾನು ಸ್ವತಃ ತನ್ನ ಕೊರಳೊಳಗಿನದೊಂದು ಭಂಗಾರದ ಸರಪಳಿಯನ್ನು ಅವನ ಕೊರಳಿಗೆ ಹಾಕಿದನು."

**ಲಾರ್ಡ ರೋನಾಲ್ಡಸೆವರ ಮತ:—** ಹಿಂದೂಗಳ ಷಡ್ದರ್ಶನಗಳೆಂದರೆ ಅಪೂರ್ವಕೃತಿಗಳೇ! ಜಗತ್ತಿನ ಬಾಲ್ಯಾವಸ್ಥೆಯಲ್ಲಿಯೇ ಆರ್ಯರು ತಮ್ಮ ಬುದ್ಧಿಬಲದಿಂದ ಎಷ್ಟುದೂರಕ್ಕೆ ಹಾರಿದ್ದರೆಂಬುದಕ್ಕೆ ಈ ಶಾಸ್ತ್ರಗಳೇ ಸಾಕ್ಷಿ.

**ಮೀಮಾಂಸೆ:—** ಆರು ದರ್ಶನಗಳಲ್ಲಿಯ ಎರಡು ಶಾಸ್ತ್ರಗಳಿಗೆ ಮಾತ್ರ ಮೀಮಾಂಸಾಶಾಸ್ತ್ರವೆಂದು ಹೆಸರು ಮೀಮಾಂಸೆಯಲ್ಲಿ ಪೂರ್ವ ಉತ್ತರ ಮೀಮಾಂಸೆ ಎಂದು ಎರಡು ಭಾಗಗಳು. ಪೂರ್ವಮೀಮಾಂಸೆಯಲ್ಲಿ ಕರ್ಮಕಾಂಡವೂ, ಉತ್ತರಮೀಮಾಂಸೆಯಲ್ಲಿ ಜ್ಞಾನಕಾಂಡವೂ ಹೇಳಲ್ಪಟ್ಟಿದೆ; ಕರ್ಮಕಾಂಡದಲ್ಲಿ ಯಜ್ಞಯಾಗ, ಅಗ್ನಿಹೋತ್ರ ಮುಂತಾದ ವಿಷಯಗಳು ಸಾಕಲ್ಯವಾಗಿ ವಿವರಿಸಲ್ಪಟ್ಟಿವೆ; ಇದರ ಕರ್ತರು ಜೈಮಿನಿ ಋಷಿಗಳು. ಇವರು ಧರ್ಮವೆಂದರೆ, ವೇದೋಕ್ತಕರ್ಮಾಚರಣೆಯೆಂದೂ, ಅದರಿಂದಲೇ ಸುಖಪ್ರಾಪ್ತಿಯಾಗುವದೆಂದೂ ಹೇಳುವರು. ಉತ್ತರ ಮೀಮಾಂಸಾಶಾಸ್ತ್ರದ ಕರ್ತರು ಶ್ರೀವೇದವ್ಯಾಸ ಋಷಿಗಳು; ಉತ್ತರ

ಮೀಮಾಂಸೆಯಲ್ಲಿ ತತ್ವಶಾಸ್ತ್ರದ ವಿವರಣೆಯೇ ಮುಖ್ಯವಾಗಿರುವ ಮೂಲಕ ಇದಕ್ಕೆ ವೇದಾಂತವೆಂದೂ ಅನ್ನುವರು. ಹಿಂದೂಗಳ ಅಪೂರ್ವಬುದ್ಧಿ ವಂತಿಕೆಯು ಮಾದರಿಯೆಂದರೆ ವೇದಾಂತವೇ ಸರಿ! ವೇದವ್ಯಾಸರ ಬ್ರಮ್ಹ ಸೂತ್ರವೆಂದರೆ, ನಾಸ್ತಿಕವಾದವನ್ನು ಖಂಡಿಸಿ, ಆಸ್ತಿಕವಾದವನ್ನು ಹಿರಿದಾಗಿ ಮಂಡಿಸುವಂಥ ಅಮೂಲ್ಯ ಗ್ರಂಥವಾಗಿದೆ. ಈ ಬಗ್ಗೆ

**ಪ್ರೊ. ಮ್ಯಾಕ್ಸಮುಲ್ಲರು ಅನ್ನುವದು:—** ವೇದಾಂತದಲ್ಲಿ ಜಗತ್ತಿಗೆ ಮೂಲಭೂತವಾಗಿರುವ ತಾತ್ವಿಕ ವಿಷಯವನ್ನು ಬಹು ಸರಸ ವಾಗಿಯೂ, ಸಂಪೂರ್ಣವಾಗಿಯೂ ವಿವರಿಸಿರುವರು; ಮತ್ತು ಒರ್ಕ್ಲೀನ ತತ್ವಜ್ಞಾನವನ್ನು ಓದಿದವನು ಉಪನಿಷತ್ತು ಹಾಗೂ ವೇದಾಂತಸೂತ್ರ ಗಳನ್ನೋದಿದರೆ, ಅವನ ಮೆದುಳನಲ್ಲಿ ಹೆಚ್ಚಿನ ಪ್ರಕಾಶವು ಬೀಳದಿರದು."

**ಪ್ರೊ. ಡಾಯುಸೆನರು ಅನ್ನುವದು:—** ವೇದಾಂತ ಸೂತ್ರಗಳನ್ನು ಬರೆದು, ಋಷಿಗಳು ಮಾನವ ಜಾತಿಯನ್ನೇ ತೀರಿಸದ ಋಣದೊಳಗೆ ಮುಳುಗಿಸಿರುವರು.

ಜರ್ಮನಿಯ ತತ್ವಜ್ಞಾನಿಗಳಾದ **ಶೋಪೆನ್ ಹಾಯೋರರು:—** "ಅಹಹ ! ವೇದಾಂತ ವಾಚನದಿಂದ ಮನವು ಎಷ್ಟೊಂದು ನಿಚ್ಚಳವಾಗುವದು ? ಜಗದಲ್ಲೆಲ್ಲ ಹುಡುಕಿದರೆ, ಉಪನಿಷತ್ತುಗಳಷ್ಟು ಹಿತಪ್ರದ ಹಾಗೂ ಶಾಂತಿಪ್ರದವಾದ ಬೇರೆ ಮೂಲಗ್ರಂಥಗಳೇ ಕಾಣವು ! ನನಗಂತೂ ವೇದಾಂತವೇ ಜೀವಿತದ ಆಸೆ; ವೇದಾಂತವೇ ನನ್ನ ಜೀವನದ ಶಾಂತಿ."

**ಮಿ. ಹ್ಯಾವೆಲ್ಲರು:—** "ವೇದಾಂತವು ಸ್ವರಾಜ್ಯದ ಅತ್ಯುಚ್ಚವಾದ ಧ್ಯೇಯವನ್ನು ಸಾರಿತು;"

**—: ಸಮಾಪ್ತ :—**